# ಶ್ರೀ ಕವಿರತ್ನ

ಶ್ರೀ ಕವಿರತ್ನ

(ಶ್ರವಣಬೆಳುಗೊಳದ ಶಾಸನ)

## ೧೯೪೯ : ಕನ್ನಡಿಗರಿಗೆ ದೊಡ್ಡ ಹಬ್ಬದ ವರ್ಷ.

ಕನ್ನಡದ ಕವಿಚಕ್ರವರ್ತಿ—ರನ್ನ ಮಹಾಕವಿ—ಈ ನಾಡಿನಲ್ಲಿ ಹುಟ್ಟಿ, ಒಂದು ಸಾವಿರ ವರ್ಷ ತುಂಬಿತು.

ಈ ಸಾವಿರ ವರ್ಷಗಳು ಸಂದ ಸವಿನೆನಪಿಗೆ ಈ ಪುಸ್ತಕವನ್ನು ಪವಣಿಸಿ ಪ್ರಕಟಿಸಲಾಗಿದೆ.

ಕವಿ ರನ್ನನ ಕೃತಿಗಳಿಂದ ಆಯ್ದು ಅನೇಕ ಕಾವ್ಯ ಭಾಗಗಳೇ ಈ ಸಂಕಲನದ ತಿರುಳು. ರನ್ನನ ಊರು, ತಾಯಿತಂದೆ, ಅಣ್ಣಂದಿರು, ಹೆಂಡಿರು, ಮಕ್ಕಳು, ಗುರುಗಳು, ಪೋಷಕರು ಇವರೆಲ್ಲರ ಪುಣ್ಯನಾಮಸ್ಮರಣೆ ; ರನ್ನನ ಕವಿಚಕ್ರವರ್ತಿತ್ವದ ಆ ಥೋರಣೆ ; ಗದಾಯುದ್ಧದ, ಅಜಿತ ಪುರಾಣದ ಸ್ವರೂಪ ಪರಿಚಯ ; ಸಗರಚಕ್ರೇಶ್ವರನ ಚರಿತೆ ; ದಾನಚಿಂತಾಮಣಿ ಅತ್ತಿಮಬ್ಬೆಯ ಮಹಿಮಾಸ್ತುತಿ— ಇವೇ ಮೊದಲಾದ ರಸಖಂಡಗಳನ್ನೂ ರಸದ ಕಾಲುವೆಗಳನ್ನೂ ಈ ಸಂಕಲನದಲ್ಲಿ ಕಾಣಬಹುದು.

'ಶ್ರೀ ಕವಿರತ್ನ'—ರನ್ನ ಮಹಾಕವಿಯ ಸ್ವರೂಪ ಪರಿಚಯಕ್ಕೆ ಕೃತಿಪರಿಚಯಕ್ಕೆ ಅಡಕವಾದ ಕೈಪಿಡಿ.

[ಹಿಂದಿನ ಹೊದಿಕೆಯ ಒಳಗೆ ನೋಡಿ.

ಬೆಲೆ : ಒಂದೂವರೆ ರೂಪಾಯಿ

# ಶ್ರೀ ಕವಿರತ್ನ

ಪವಣಿಸಿದುದು:

ಜಿ. ಪಿ. ರಾಜರತ್ನಂ




ಮಾರಾಟಗಾರರು:

ಸತ್ಯಶೋಧನ ಪುಸ್ತಕ ಭಂಡಾರ

ಕೋಟೆ, ಬೆಂಗಳೂರು.

ಕವಿಚಕ್ರವರ್ತಿ ಎನ್ನಿಸಿದ ಕವಿರನ್ನನು
ಕನ್ನಡನಾಡಿನಲ್ಲಿ ಜನ್ಮತಾಳಿ
ಒಂದು ಸಾವಿರ ವರ್ಷಗಳು ತುಂಬಿದ ನೆನಪಿಗೆ
ಈ ಪುಸ್ತಕವನ್ನು ಪವಣಿಸಿದ್ದೇನೆ



## ಈ ಪುಸ್ತಕವನ್ನು ಪವಣಿಸುವುದರಲ್ಲಿ ಪಡೆದ ನೆರವಿನ ನೆನಪು

**ರನ್ನನ ಅಜಿತತೀರ್ಥಕರ ಪುರಾಣತಿಲಕಂ**

**ರನ್ನನ ಗದಾಯುದ್ಧಂ**

(ಕಾವ್ಯಕಲಾನಿಧಿ ಮಾಲೆಯಲ್ಲಿ ಶ್ರೀ ಮಂ. ಆ. ರಾಮಾನುಜಯ್ಯಂಗಾರ್ಯರು ಸಂಪಾದಿಸಿ ಪ್ರಕಟಿಸಿದ್ದು : ೧೯೧೦, ೧೯೩೫.)

**ಪೊನ್ನನ ಶಾಂತಿಪುರಾಣಂ**

(ಶ್ರೀ ಎ. ವೆಂಕಟರಾವ್ ಮತ್ತು ಶ್ರೀ ಎಚ್. ಶೇಷಯ್ಯಂಗಾರ್, ಮದ್ರಾಸ್, ೧೯೨೯.)

BOMBAY-KARNATAK INSCRIPTIONS (Vol. I-Part 1.)
South Indian Inscriptions Vol. XI, Part 1.

**'ರನ್ನನ ಪರಶುರಾಮಚರಿತ ಚಕ್ರೇಶ್ವರಚರಿತಗಳನ್ನೂ ಗದಾಯುದ್ಧದ ರಚನಾಕಾಲವನ್ನೂ ಕುರಿತು'**

(ಶ್ರೀ ಎಂ. ಗೋವಿಂದ ಪೈ ಅವರ 'ಮೂರು ಉಪನ್ಯಾಸಗಳು'—ಕನ್ನಡ ರಿಸರ್ಚ್ ಆಫೀಸ್, ಧಾರವಾಡ, ೧೯೪೦.)

**'ದಾನಚಿಂತಾಮಣಿ ಅತ್ತಿಮಬ್ಬೆ'**

(ಶ್ರೀ ತೀ. ನಂ. ಶ್ರೀಕಂಠಯ್ಯ ಅವರು. ಪ್ರಬುದ್ಧ ಕರ್ಣಾಟಕ, ಸಂಪುಟ ೨೯, ಸಂಚಿಕೆ ೪, ೧೯೪೮.)



# ಅರಿಕೆ

ಈ ಪುಸ್ತಕದಲ್ಲಿ ಆರು ವಿಭಾಗಗಳಿವೆ.

ಮೊದಲನೆಯ ವಿಭಾಗ—ರನ್ನನ ಜೀವನಚರಿತ್ರೆಗೆ ಸಂಬಂಧಪಟ್ಟ ಆಧಾರಗಳನ್ನೂ ವಿವರಗಳನ್ನೂ ಒಳಕೊಂಡಿದೆ.

ಎರಡನೆಯ ವಿಭಾಗ—ರನ್ನನ ಕೃತಿಗಳಲ್ಲಿ ಸರ್ವಜನಪ್ರಿಯವಾಗಿರುವ ಗದಾಯುದ್ಧದ ಸ್ವಲ್ಪಪರಿಚಯವಿದೆ. ಹೆಚ್ಚು ತಿಳಿಯಬೇಕು ಎನ್ನುವವರಿಗೆ ಕನ್ನಡದಲ್ಲಿ ಸಾಕಷ್ಟು ಪುಸ್ತಕ ಸಹಾಯವಿರುವುದರಿಂದ ಅದನ್ನು ಇಲ್ಲಿ ಬೆಳಸಿಲ್ಲ. (ಈ ಸಹಾಯಗ್ರಂಥಗಳನ್ನು ಮುಂದೆ ಬೇರೆಯೇ ಕಾಣಿಸಿದೆ.)

ಮೂರನೆಯ ವಿಭಾಗ—ಕವಿರನ್ನನಿಗೆ ಬಹುಪ್ರಿಯವಾದ ಅಜಿತಪುರಾಣದ ಸ್ವರೂಪವನ್ನೂ ಅದರ ಹಿರಿಮೆಯನ್ನೂ ಅವನ ಮಾತುಗಳನ್ನೇ ಆಯ್ದು ಕೊಂಡು ಅಷ್ಟರಲ್ಲೇ ನಿರೂಪಿಸುತ್ತದೆ.

ನಾಲ್ಕನೆಯ ವಿಭಾಗದಲ್ಲಿ—ಅದೇ ಅಜಿತಪುರಾಣದ ಉತ್ತರಾರ್ಧದ ಲ್ಲಿರುವ ಎರಡನೆಯ ಚಕ್ರೇಶ್ವರನ ಕಥಾಭಾಗದಲ್ಲಿ ಹೇರಳವಾಗಿರುವ 'ಆಗಮ ಭಾಷೆ'ಗಳನ್ನು ಆದಷ್ಟು ಬಿಟ್ಟುಕೊಂಡು, ಬರಿಯ 'ಭವ್ಯಾಂಗ'ವಾಗದೆ 'ಕಾವ್ಯಾಂಗ'ವಾಗುವ ಕಥೆಯನ್ನು ಸಂಗ್ರಹಿಸಿಕೊಟ್ಟಿದೆ.

ಐದನೆಯ ವಿಭಾಗದಲ್ಲಿ—ಅದೇ ಅಜಿತಪುರಾಣದಲ್ಲಿ, ರನ್ನನು ಕೊಂಡಾಡಿರುವ ದಾನಚಿಂತಾಮಣಿ ಅತ್ತಿಮಬ್ಬೆಗೆ ಸಂಬಂಧಿಸಿದ ಕಾವ್ಯಭಾಗವನ್ನು ಆಯ್ದುಕೊಟ್ಟಿದೆ. ಈ ಭಾಗಕ್ಕೆ ಎರಡು ಪರಿಶಿಷ್ಟಗಳಿವೆ. ಇವುಗಳನ್ನು ಯಾರು ಬರೆದರೋ ಗೊತ್ತಿಲ್ಲ. ಮೊದಲನೆಯದು—ಪೊನ್ನನ ಶಾಂತಿಪುರಾಣದ ಒಂದು ಮಾತೃಕೆಯ ಕೊನೆಯಲ್ಲಿ ಸೇರಿಕೊಂಡಿದ್ದ ಏಳು ವೃತ್ತಗಳು. ಎರಡನೆಯದು—ಧಾರವಾಡ ಡಿಸ್ಟ್ರಿಕ್ಟಿನ ಗದಗು ತಾಲ್ಲೂಕಿನ ಲಕ್ಕುಂಡಿ (ಹಿಂದಿನ ಲೊಕ್ಕಿಗುಣ್ಡಿ) ಗ್ರಾಮದ ಒಂದು ಜೈನ ಬಸದಿಯ ಬಳಿ ಸಿಕ್ಕಿದ ಶಿಲಾಶಾಸನದ ಸಂಗ್ರಹ. (ಈ ಲಕ್ಕುಂಡಿಯ ಶಾಸನದ ಕಾಲವನ್ನೂ ವಿಷಯವನ್ನೂ ಶೈಲಿಯನ್ನೂ ಗಮನಿಸಿ, ಶ್ರೀ ತೀ. ನಂ. ಶ್ರೀಕಂಠಯ್ಯನವರು 'ರನ್ನನೇ ಈ ಶಾಸನವನ್ನು ರಚಿಸಿದ್ದರೂ ಇರಬಹುದು!' ಎನ್ನುತ್ತಾರೆ. 'ಈ ಊಹೆಗೆ ಯಾವ ಪ್ರತಿಬಂಧಕವೂ ತೋರುವುದಿಲ್ಲ; ಸಂಭಾವ್ಯತೆಯೇ ಹೆಚ್ಚು.')

ಆರನೆಯ ವಿಭಾಗದಲ್ಲಿ—ಕಾವ್ಯಧರ್ಮವನ್ನೂ ಪರಮಜಿನಧರ್ಮವನ್ನೂ ಕುರಿತು ರನ್ನನ ಕೃತಿಗಳಿಂದ ಕೆಲವು ಪದ್ಯಗಳನ್ನು ಆಯ್ದುಕೊಂಡಿದೆ.

ಈ 'ಶ್ರೀ ಕವಿರತ್ನ' ಕನ್ನಡಿಗರ ಕೈಯಲ್ಲಿ ಬೆಳೆಯಲಿ.

೧೦-೧೨-೧೯೪೯<br>ಬೆಂಗಳೂರು

**ಜಿ. ಪಿ. ರಾಜರತ್ನಂ**

---

## ಗದಾಯುದ್ಧವನ್ನು ಕುರಿತು

**ಗದಾಯುದ್ಧ ನಾಟಕಂ**—ಬಿ. ಎಂ. ಶ್ರೀಕಂಠಯ್ಯ. ೧೯೨೬.

**ಗದಾಯುದ್ಧ ಕಥೆ**—ಎಂ. ಎನ್. ಕಾಮತ್, ಮಂಗಳೂರು. ೧೯೨೮.

**ರನ್ನನ ಕೃತಿರತ್ನ**—ರಂ. ಶ್ರೀ ಮುಗಳಿ. ೧೯೪೬. ಕರ್ಣಾಟಕ ತರುಣರ ಸಂಘ, ರಾಯಚೂರು. ಒಂದೂವರೆ ರೂಪಾಯಿ.

**ರನ್ನನ ರಸಘಟ್ಟಿ**—ಜಿ. ಪಿ. ರಾಜರತ್ನಂ. ೧೯೪೮. ಹಿಂದ್ ಕಿತಾಬ್ಸ್ ಲಿಮಿಟೆಡ್, (ಬೊಂಬಾಯಿ) ಬೆಂಗಳೂರು ೩. ಒಂದೂಕಾಲು ರೂಪಾಯಿ.

**ಗದಾಯುದ್ಧ ಸಂಗ್ರಹಂ**—ತೀ. ನಂ. ಶ್ರೀಕಂಠಯ್ಯ. ೧೯೪೯. ಕಾವ್ಯಾಲಯ, ಮೈಸೂರು. ಮೂರು ರೂಪಾಯಿ.

**ರನ್ನವಾಣಿ**—ಸಾ. ವೆಂಕಟಾಚಲಪತಿ. ೧೯೪೯. ಸತ್ಯಶೋಧನ ಪ್ರಕಟನ ಮಂದಿರ, ಬೆಂಗಳೂರು. ಹತ್ತಾಣೆ.

# ಒ ಳ ಪಿ ಡಿ





# ರನ್ನನ ಹಜ್ಜೆಯ ಗುರುತು

ಕ್ರಿ.ಶ.

೯೪೯ **ಮುದುವೊಳಲಲ್ಲಿ ರನ್ನನು ಜನ್ಮತಾಳಿದ್ದು.**

? ಎಲ್ಲಿಯೋ ಸಾಮಂತರ ಆಶ್ರಯದಲ್ಲಿದ್ದಾಗ ತನ್ನ ಮೊದಲನೆಯ ಕೃತಿ 'ಪರಶುರಾಮಚರಿತ'ವನ್ನು ಬರೆದದ್ದು. ಸುಮಾರು ೯೭೪ರಿಂದ ೯೭೯ರ ಒಳಗೆ ಇರಬಹುದೇ? ಎನ್ನುತ್ತಾರೆ, ಶ್ರೀ ಗೋವಿಂದ ಪೈ.

೯೮೧ ಚಾವುಂಡರಾಯನಿಂದ ಗೋಮಟೇಶ್ವರನ ಪ್ರತಿಷ್ಠೆ. ಆಗ್ಗೆ ಗಂಗಮಂಡಲೇಶ್ವರರಲ್ಲಿ ಬಂದು ಸೇರಿದ್ದ ರನ್ನನು, ಅದರ ನೆನಪಿಗೆ, ಪಂಪನ ಆದಿಪುರಾಣದಲ್ಲಿ ಕಾಣುವ ಭರತಬಾಹುಬಲಿ ಪ್ರಸಂಗವನ್ನು ಎತ್ತಿಕೊಂಡು ತನ್ನ ಎರಡನೆಯ 'ಚಕ್ರೇಶ್ವರಚರಿತ'ವನ್ನು ಬರೆದಿರಬಹುದೋ ಹೇಗೋ, ಎನ್ನುತ್ತಾರೆ, ಶ್ರೀ ಗೋವಿಂದ ಪೈ.

೯೮೯ **ರನ್ನನಿಗೆ ಗಂಡುಮಗು ಆದದ್ದು.** ಆ ವೇಳೆಗೆ ಇವನು ಚಾಳುಕ್ಯರ ಸಕಲಚಕ್ರವರ್ತಿಯ ಆಸ್ಥಾನಕ್ಕೆ ಬಂದಿದ್ದಾನೆ. ಆ ವೇಳೆಗೆ ಚಾವುಂಡರಾಯ ತೀರಿಕೊಂಡು, ಈ ಹೊಸ ಆಶ್ರಯಕ್ಕೆ ಬಂದಿದ್ದಾನೋ ಏನೋ! ಆ ಹಿಂದಿನ ಆಶ್ರಯದಾತನ ನೆನಪಿಗಾಗಿ ಮಗನಿಗೆ '**ರಾಯ**' ಎಂದು ನಾಮಕರಣ ಮಾಡಿದ್ದಾನೆ.

? ಕರ್ಣಾಟಕದ ಸಕಲಚಕ್ರವರ್ತಿಯಾದ ಪಡುವಣ ಚಾಳುಕ್ಯ ಆಹವಮಲ್ಲ ತೈಲಪನಿಂದ (೯೭೩-೯೯೭) ಬಿರುದು ಪಡೆದು '**ಅಭಿನವ ಕವಿಚಕ್ರವರ್ತಿ**'ಯಾಗಿದ್ದಾನೆ.

೯೯೩ **ಅತ್ತಿಮಬ್ಬೆಯ ಪ್ರೀತಿಗಾಗಿ 'ಅಜಿತಪುರಾಣ'ದ ರಚನೆ. ರನ್ನನಿಗೆ ಹೆಣ್ಣುಮಗು ಆದದ್ದು.** ದಾನಚಿಂತಾಮಣಿ ಎನ್ನಿಸಿದ ಅತ್ತಿಮಬ್ಬೆಯ ಮೇಲಿನ ಅಭಿಮಾನದಿಂದ ಮಗಳಿಗೆ '**ಅತ್ತಿಮಬ್ಬೆ**' ಎಂದು ನಾಮಕರಣ ಮಾಡಿದ್ದು.

? **ಗದಾಯುದ್ಧದ ರಚನೆ.** ಚಾಳುಕ್ಯರ ಚಕ್ರವರ್ತಿಯಾ ತೈಲಪನ ಮಗನಾದ ಇರಿವಬೆಡಂಗ ಸತ್ಯಾಶ್ರಯನು (೯೯೭-೧೦೦೮) ಈ ಕಾವ್ಯದ ನಾಯಕನಾಗಿ, ಚಕ್ರವರ್ತಿಯೆಂದು ಕರೆಯಲ್ಪಟ್ಟಿರುವುದರಿಂದ, ಇದರ ಕಾಲ ಸುಮಾರು ೧೦೦೨-೧೦೦೮ ಇರಬಹುದು, ಎನ್ನುತ್ತಾರೆ.

# ೧. ಕವಿಚಕ್ರವರ್ತಿ ರನ್ನ

೧

ಇದೇನಯ್ಯಾ ಇದು, ಬ್ರಹ್ಮಲಿಪಿ?

ಇದು 'ಬ್ರಹ್ಮಲಿಪಿ' ಅಲ್ಲ, ಮಗು. ಇದು 'ಬ್ರಾಹ್ಮೀಲಿಪಿ'ಯಿಂದ ಹುಟ್ಟಿ ಬೆಳೆದ ಕನ್ನಡಲಿಪಿ.

'ಬ್ರಾಹ್ಮೀಲಿಪಿ' ಎಂದರೆ?

'ಬ್ರಾಹ್ಮೀಲಿಪಿ' ಎಂದರೆ . . . ನಮ್ಮ ಭಾರತದ ತ್ರಿವರ್ಣಧ್ವಜ ಗೊತ್ತಿದೆ ತಾನೆ? ಅದರ ಮಧ್ಯದಲ್ಲಿರುವುದು—'ಅಶೋಕ ಚಕ್ರ'. ಈ ಅಶೋಕ ಎಂಬ ದೊರೆ ತನ್ನ ಶಾಸನಗಳನ್ನು ಬರಸುವುದಕ್ಕೆ ಬಳಸಿರುವ ಲಿಪಿಯನ್ನು 'ಬ್ರಾಹ್ಮೀಲಿಪಿ' ಎಂದು ಕರೆಯುತ್ತಾರೆ.

ಅದು ಸರಿ; ಈ ಲಿಪಿಯನ್ನು ಮೊದಲು ಸೃಷ್ಟಿಸಿದವರು ಯಾರು?

ಜೈನರ ಮೊದಲನೆಯ ತೀರ್ಥಂಕರನಾದ ಆದಿಬ್ರಹ್ಮನು ತನ್ನ ಮಗಳಾದ ಬ್ರಾಹ್ಮೀ ಎಂಬವಳಿಗೆ ಈ ಲಿಪಿಯನ್ನು ಮೊದಲು ಕಲಿಸಿದನಂತೆ. ಆತನೇ ಇದನ್ನು ಸೃಷ್ಟಿಸಿದನೆಂದೂ ನಂಬಿಕೆ.

ಓ! ಮತ್ತೆ . . . ಈ ಮೇಲೆ ಬರೆದಿರುವ ಕನ್ನಡಲಿಪಿ, ಇದು ಯಾವ ಕಾಲದ ಬರವಣಿಗೆ?

ಇದು ಹತ್ತನೆಯ ಶತಮಾನದ ಬರವಣಿಗೆ. ಈಗ ಸುಮಾರು ಸಾವಿರ ವರುಷದ ಕೆಳಗೆ ಕನ್ನಡವನ್ನು ಹೀಗೆ ಬರೆಯುತ್ತಿದ್ದರು.

ಈಗ . . . ಇಲ್ಲಿ ಬರೆದಿರುವುದು ಏನು?

ಇಲ್ಲಿ ಬರೆದಿರುವುದು 'ಶ್ರೀ ಕವಿರತ್ನ' ಎಂದು.

೨

ಯಾರಿವನು, ಈ ಕವಿ? ಕವಿರತ್ನ?

ಇವನು—

ಕವಿಮುಖಚಂದ್ರಂ ಕವಿಚ
ಕ್ರವರ್ತಿ ಕವಿರಾಜಶೇಖರಂ ಕವಿರಾಜಂ
ಕವಿಜನಚೂಡಾರತ್ನಂ
ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ ೧

ಕವಿಮಾರ್ಗದೊಳೊಪ್ಪಾಣಿಪ
ಠವಣಿಪ ಕಮ್ಮೈಸುವೆಡೆಯೊಳೊಪ್ಪಾಣಿಸಲುಂ
ಠವಣಿಸಲುಂ ಕಮ್ಮೈಸಲು
ಮಿವನಂತಾರ್ ಬಲ್ಲರೆನಿಸಿದಂ ಕವಿರತ್ನಂ ೨

ವಸುಧೆಯೊಳಗೊಂದು ರತ್ನಮಿ
ದೆಸೆದಿರ್ದುದು ಪಲವು ರತ್ನಮಿಲ್ಲೆಂಬಿನಮೇಂ
ಮಸುಳಿಸಿದನೊ ಬಹುರತ್ನಾ
ವಸುಂಧರಾಯೆಂಬ ವಾಕ್ಯಮುಂ ಕವಿರತ್ನಂ ೩

ಆರಾತೀಯಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ ೪

ರಸಮಂ ಭಾವಮುಮಂ ಕಾ
ೞಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ
ಪೊಸದೇಸೆಯ ನುಡಿಗಳೊಳಂ
ಪೊಸೆಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ ೫

ಕನ್ನಡಮೆರಡಱನೂಱಱ
ಕನ್ನಡಮಾ ತಿರುಳಕನ್ನಡಂ ಮಧುರಮ್ಯೋ
ತ್ಪನ್ನಂ ಸಂಸ್ಕೃತಮೆನೆ ಸಂ
ಪನ್ನಂ ನೆಗೞ್ದುಭಯಕವಿತೆಯೊಳ್ ಕವಿರನ್ನಂ ೬

ಶ್ರುತರಮಣೀಯನೆ ಕವಿತಾ
ಚತುರನೆ ಚಾರಿತ್ರಮಣಿವಿಭೂಷಣರತ್ನಂ
ಶ್ರುತರಮಣೀಯನೆ ಕವಿತಾ
ಚತುರನೆ ಚಾರಿತ್ರರತ್ನಜಲಧಿಯ ರತ್ನಂ ೭

ವನಿತಾನಾಯಕರತ್ನಂ
ತನೂದರೀಕನಕಸೂತ್ರರತ್ನಂ ಕಾಂತಾ
ಸ್ತನಹಾರರತ್ನಮಬಲಾ
ಜನಚೂಡಾರತ್ನಮೆನಿಸಿದಂ ಕವಿರತ್ನಂ ೮

ರತ್ನಪರೀಕ್ಷಕನಾಂ ಕೃತಿ
ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ
ರತ್ನಮುಮಂ ರನ್ನನ ಕೃತಿ
ರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ ೯

ಅಭಿಮತಜೈನೇಂದ್ರವಚೋ
ವಿಭವಂ ಶಬ್ದಾನುಶಾಸನಪ್ರಭವವಚೋ
ವಿಭವಮೊಡನೆಸೆಯೆ ರಂಜಿಪ
ನುಭಯವ್ಯಾಕರಣಪಂಡಿತಂ ಕವಿರತ್ನಂ ೧೦

ಕರಮೆಸೆದುವು ರತ್ನತ್ರಯ
ಪರಿಕಲ್ಪದೆ ಪರಶುರಾಮಚರಿತಂ ಚಕ್ರೇ
ಶ್ವರಚರಿತಮಜಿತತೀರ್ಥೇ
ಶ್ವರಚರಿತಂ ರತ್ನಸಿಂದೆ ಭುವನತ್ರಯದೊಳ್ ೧೧

ಇತರ ಕವಿಗಳು ನಕ್ಷತ್ರಗಳಾದರೆ, ಈ ಕವಿ ಅವರಿಗೆ ಮುಖ್ಯನಾದ ಚಂದ್ರ. ಇವನು ಕವಿಜನರ ತಲೆಯೊಡವೆ. ಕವಿಚಕ್ರವರ್ತಿ, ಕವೀಶ್ವರ, ಕವಿರಾಜ, ಕವಿತಿಲಕ, ಕವಿಬ್ರಹ್ಮ ಎಂದು ಹೆಸರಾದವನು. ಹೊಸಹೊಸ ಬಗೆಯಿಂದ ಹೊಸ ಹೊಸ ಭಾವಗಳನ್ನು ಹೊಸೆಯಿಸಿದವನು. ಭೂಮಿಯಲ್ಲಿ ಬಹು ರತ್ನಗಳು ಉಂಟು ಎಂಬ ಸಾಮತಿಯನ್ನು ಸುಳ್ಳುಮಾಡಿ, ಇರುವು ದೊಂದೇ ರತ್ನ, ಈ ಕವಿರತ್ನ ಎಂಬ ಹೆಸರು ಪಡೆದವನು. ಹಿಂದಿನ ಕವೀಶ್ವರರು ಯಾರೂ ಸಾಧಿಸದ ರೀತಿಯಲ್ಲಿ ಸರಸ್ವತಿಯನ್ನು ಸಾಧಿಸಿದವನು. ತಿರುಳು ಕನ್ನಡದಲ್ಲೂ ಜೇನಿನಂತೆ ಸವಿಯಾದ ಸಂಸ್ಕೃತದಲ್ಲೂ ಕೃತಿರಚನೆ ಮಾಡಿ, ಉಭಯಕವಿತೆಯಲ್ಲಿ ರತ್ನನೆನ್ನಿಸಿದವನು. ಹಿಂದೆ ಪಂಪನು ಮಾಡಿ ದಂತೆ ಧರ್ಮವನ್ನೂ ಕಾವ್ಯಧರ್ಮವನ್ನೂ ತಾನು ಬದುಕಿ, ಅದನ್ನು ಕೃತಿ ಮಾಡಿದವನು. ಕಾಂತಾಲೋಕದ ಕಟಾಕ್ಷಕ್ಕೆ ಪಾತ್ರನಾದವನು. ಕನ್ನಡ ಸಂಸ್ಕೃತಗಳ ಉಭಯ ವ್ಯಾಕರಣಗಳಲ್ಲೂ ಪಂಡಿತನಾದವನು. **ಪರಶುರಾಮ ಚರಿತ, ಚಕ್ರೇಶ್ವರ ಚರಿತ, ಅಜಿತತೀರ್ಥೇಶ್ವರ ಚರಿತ** ಎಂಬ ಮೂರು ಜೈನ ಕಾವ್ಯಗಳನ್ನು ಬರೆದವನು. (ಈ ಮೂರಾದ ಮೇಲೆ **ಸಾಹಸಭೀಮ ವಿಜಯ**ವೆಂಬ ನಾಲ್ಕನೆಯ ಕೃತಿಯನ್ನು ರಚಿಸಿದವನು.) ಈತನ ಸಾಹಸ ಭೀಮ ವಿಜಯವನ್ನು ಪರೀಕ್ಷಿಸುವವನಿಗೆ ಎಂಟೆದೆ ಬೇಕು! ತಾನು ರತ್ನ ಪರೀಕ್ಷಕನೆಂದು ಫಣಿಪತಿಯ ಫಣಾರತ್ನಕ್ಕೆ ಕೈಯಿಕ್ಕುವುದೂ ಒಂದೇ, ಕೃತಿ ರತ್ನ ಪರೀಕ್ಷಕನೆಂದು ರನ್ನನ ಕೃತಿರತ್ನದ ಪರೀಕ್ಷೆಗೆ ತೊಡಗುವುದೂ ಒಂದೇ!

೩

ಇವನಿಗೆ ಈ '**ಕವಿಚಕ್ರವರ್ತಿ**' ಎಂಬ ಬಿರುದನ್ನು ಕೊಟ್ಟವರು ಯಾರೊ?

ಕೊಟ್ಟವರು—

ಪಡೆಯೆಡೆಯ ಕಡೆಯ ಬಡವರ್
ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್
ಪಡೆದಂ ಮಹಿಮೋನ್ನತಿಯಂ
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ ೧೨

ಮೊದಲೊಳ್ ಸಾವಂತರಿನಿನಿ
ಸುದಿತೋದಿತನಾಗಿ ಮಂಡಲೇಶ್ವರನಿಂದ
ಭ್ಯುದಯಪರನೆನಿಸಿ ಚಕ್ರಿಯಿ
ನುದಯಪರಂಪರೆಯನೆಯ್ದಿದಂ ಕವಿರನ್ನಂ ೧೩

ಕೊಂಡಾಟದ ಸಾಮಂತರ
ಮಂಡಳಿಕರ ಸಕಲಚಕ್ರವರ್ತಿಗಳ ಸಭಾ
ಮಂಡಲದೊಳುಭಯಕವಿಮುಖ
ಮಂಡನಮಾಗಿರ್ಪ ರತ್ನಮೀ ಕವಿರತ್ನಂ ೧೪

ಮದನನವತಾರಮಂ ಕನ
ಕದಂಡಚಾಮರಮನುನ್ಮದೇಭಮನುತ್ತುಂ
ಗದ ಛತ್ರಗಾವೆಯಂ ಪಡೆ
ದುದಾತ್ತಕವಿತಿಲಕನೆನಿಸಿದಂ ಕವಿರತ್ನಂ ೧೫

ದೊರೆಯಱಿವ ವಸ್ತುಪುರುಷರ್
ಪರಿಕಿಸಿ ಬೆಲೆಮಾಡಿ ಗಂಗಮಂಡಲಚಕ್ರೇ
ಶ್ವರಕಟಕೋತ್ತಮನಾಯಕ
ವಿರಚನೆಯಿನನರ್ಘರತ್ನಮಾದಂ ರತ್ನಂ ೧೬

ವಸುಧಾಧಿಪತಿಯ ಕಟಕದೊ
ಳೆಸೆದೊಪ್ಪೆ ಸುವರ್ಣರಚನೆ ಕೇವಣದೊಳ್ ಸೇ
ರಿಸಿದುದಱಿಂದೀಗಳ್ ರಂ
ಜಿಸಿದ ಮಹಾರತ್ನಮೆನಿಸಿದಂ ಕವಿರತ್ನಂ ೧೭

ಅವನಿಪರೊಳ್ ನಿಜಭುಜಚ
ಕ್ರವರ್ತಿ ರಣಜಯಕೆ ತೈಲನೆಂತಸಹಾಯಂ
ಕವಿಗಳೊಳವಂತೆ ಕವಿಚ
ಕ್ರವರ್ತಿ ಕವಿರತ್ನನಂತು ಕೃತಿಗಸಹಾಯಂ ೧೮

ಮತಿ ಕೋಶಂ ಪದವಿದ್ಯೆ ಕಂಠಿಕೆ ಜಸಂ ಶ್ವೇತಾತಪತ್ರಂ ಸರ
ಸ್ವತಿ ಮಾದೇವಿ ಪದೋಕ್ತಿ ಭೇರಿ ಕಳಿತಂ ಸಿಂಹಾಸನಂ ಸಂದಲಂ
ಕೃತಿ ಚಂಚಚ್ಚಮರೀಜವಾಗೆ ಕವಿತಾಸಾಮ್ರಾಜ್ಯಮಂ ತಾಳ್ದಿದು
ನ್ನತಿಯಿಂದಂ ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ ೧೯

ರನ್ನನಿಗೆ—ಎಂದರೆ ರತ್ನನಿಗೆ—(ರನ್ನ ಎಂಬುದು ರತ್ನ ಎಂಬುದರ ತದ್ಭವ)—ಈ ಬಿರುದನ್ನು ಸಾಮಾನ್ಯರು ಕೊಟ್ಟಿದ್ದಲ್ಲ. ಯಾರ ಕೈಯ ಕೂಳಿಗೋ ಕಾದು, ಯಾರ ಸೇವೆಯಲ್ಲೋ ಸವೆದು, ಹೋರಾಡುವ ಯಾರೋ ನಿರ್ಗತಿಕರಾದ ನಿಕೃಷ್ಟ ಸೈನಿಕರು ಕೊಟ್ಟಿದ್ದಲ್ಲ ಈ ಬಿರುದು; ಆಗಿನ ಕಾಲದ ಚಾಲುಕ್ಯರ ಚಕ್ರವರ್ತಿಯಾದ ತೈಲಪನು ಇವನಿಗೆ ಉನ್ನತವಾದ ಮಹಿಮೆಯನ್ನು ಉಂಟುಮಾಡಿ, ಈ **ಕವಿಚಕ್ರವರ್ತಿ** ಎಂಬ ಬಿರುದನ್ನೂ ಕೊಟ್ಟನು.

ಇವನಿಗೆ ಮೊದಲು ಆಶ್ರಯಕೊಟ್ಟು ಗೌರವಿಸಿದ ಸಾಮಂತ ರಾಜರು ಯಾರೋ ತಿಳಿದುಬಂದಿಲ್ಲ. ಅನಂತರ ಇವನಿಗೆ ಅಭ್ಯುದಯವನ್ನು ಉಂಟುಮಾಡಿದ ಮಂಡಲೇಶ್ವರರೆಂದರೆ—ಯಾವ ಗಂಗಮಂಡಲೇಶ್ವರರಲ್ಲಿ ಚಾವುಂಡರಾಯನು ಇದ್ದು ಇವನಿಗೆ ಪೋಷಕನಾದನೋ ಆ ತಲಕಾಡಿನ ಪಶ್ಚಿಮಗಂಗರೆಂಬ ಮಂಡಲೇಶ್ವರರು. ಕಡೆಯ 'ಚಕ್ರಿ' ಎಂದರೆ, ಪಡುವಣ ಚಾಲುಕ್ಯ ಚಕ್ರವರ್ತಿಯಾದ ತೈಲಪ. ಇವನಿಂದ ಕವಿರತ್ನನು ಉದಯಪರಂಪರೆಯನ್ನು ಹೊಂದಿ ಕವಿಚಕ್ರವರ್ತಿಯಾದನು.

ಯಾವುದರ ಬೆಲೆಯೇನು, ಯೋಗ್ಯತೆಯೇನು ಎಂಬುದನ್ನು ತಿಳಿದು ಪರೀಕ್ಷೆಮಾಡಿ ಬೆಲೆ ಕಟ್ಟುವವರು ಕವಿಯಾದ ರತ್ನನ ಯೋಗ್ಯತೆಯನ್ನು ತಿಳಿದರು. ಅಂದಿನಿಂದ ಇವನು ಗಂಗಮಂಡಲ ಚಕ್ರೇಶ್ವರನ ರಾಜಧಾನಿಯ ಉತ್ತಮರಿಗೆಲ್ಲ ತಾನು ನಾಯಕನಾದುದರಿಂದ ನಿಜವಾಗಿಯೂ ಅನರ್ಘ (ಅಮೂಲ್ಯ)ವಾದ ರತ್ನವೇ ಆದನು.

ಚಿನ್ನದಿಂದ ಆದ ಕೈಕಡಗ ಎಲ್ಲಿ ಹೋಗಿ ಸೇರಬೇಕೋ ಅಲ್ಲಿ ಹೋಗಿ ಸೇರಿದರೆ, ಅದು ಚಿನ್ನವಾದದ್ದಕ್ಕೆ ಸಾರ್ಥಕ. ಕವಿಯಾದ ರತ್ನನಾದರೂ ಯಾರೋ ಸಾಮಂತರ ಆಸ್ಥಾನದಲ್ಲಿರುವುದಕ್ಕಿಂತ, ಮಂಡಲೇಶ್ವರರ ಆಸ್ಥಾನಕ್ಕೆ ಬಂದು ಪ್ರಕಟವಾದದ್ದು, ಮಹಾರತ್ನ ಎಲ್ಲಿ ಸೇರಬೇಕೋ ಅಲ್ಲಿಗೆ ಸೇರಿದ ಹಾಗಾಯಿತು.

ಅನಂತರವೇ ಇವನು ಅಲ್ಲಿಂದ ಚಕ್ರವರ್ತಿಯಾದ ತೈಲಪನ ಆಶ್ರಯಕ್ಕೆ ಬಂದು ಕವಿಚಕ್ರವರ್ತಿಯಾದದ್ದು. ಅಲ್ಲಿಯಾದರೋ—

ರಾಜರುಗಳಲ್ಲಿ ತನ್ನ ಭುಜಬಲದಿಂದ ಚಕ್ರವರ್ತಿಯಾದ ತೈಲಪನು ಯುದ್ಧದಲ್ಲಿ ಜಯ ಪಡೆಯುವಾಗ ಹೇಗೆ ಬೇರೆಯವರ ಸಹಾಯ ಬೇಡುವು ದಿಲ್ಲವೋ ಹಾಗೆಯೇ ಕೃತಿರಚನೆ ಮಾಡುವಾಗ ಕವಿಗಳಲ್ಲಿ ಈ ಕವಿಚಕ್ರವರ್ತಿ ಯಾದ ಕವಿರನ್ನನೂ ಅಸಹಾಯನಾದವನು.

ಈ ಕವಿಚಕ್ರವರ್ತಿಯ ವೈಭವ? ತನ್ನ ಬುದ್ಧಿಯೇ ತನಗೆ ಭಂಡಾರ, ಪದವಿದ್ಯೆಯೇ ಕೊರಳಿನ ಹಾರ, ಯಶಸ್ಸೇ ಶ್ವೇತಚ್ಛತ್ರ, ಸರಸ್ವತಿಯೇ ರಾಣಿ, ಪದಗಳ ಉಕ್ತಿಯೇ ಭೇರಿ, ತನ್ನ ಕಳಿತ ಎಂದರೆ ಪಕ್ವವಾದ ಪಾಂಡಿತ್ಯವೇ ಸಿಂಹಾಸನ, ತಾನು ಬಳಸುವ ಅಲಂಕಾರಗಳೇ ಚಲಿಸುವ ಚಾಮರಗಳು— ಹೀಗೆ ಕವಿಚಕ್ರವರ್ತಿ ರನ್ನನು ತನ್ನ ಕವಿತಾಸಾಮ್ರಾಜ್ಯವನ್ನು ಮೆರೆದನು.

೪

ಈ ರನ್ನ ಕ್ರಿ. ಶ. ೯೪೯ರಲ್ಲಿ ಹುಟ್ಟಿದವನು.

ದೊರೆಕೊಂಡು ಸೌಮ್ಯಸಂವ
ತ್ಸರದೊಳ್ ಕರ್ಕಟಕರಾಶಿಯೊಳ್ ಸೌಮ್ಯಮುಖಂ
ಗುರುವಚ್ಚಳನುದಯಿಸಿದಂ
ಸರಸ್ವತೀರತ್ನಮಂಡನಂ ಕವಿರತ್ನಂ ೨೦

ಬೆಳುಗರೆ ನಾಡೊಳ್ ಪುಟ್ಟಿದ
ಬಳೆಗಾಜರ ಕುಲದೊಳೆಱೆದ ಜಿನಶಾಸನಮಂ
ಬೆಳಗುವ ಚಕ್ರೇಶ್ವರ ಮಂ
ಡಳೇಶ್ವರಂ ಬೆಸಸೆ ನೆಗಟ್ದ ಕವಿ ಕವಿರತ್ನಂ ೨೧

ಅಱಿಕೆಯ ಗಟ್ಟಿಗೆಯುಂ ಪೆ
ರ್ದೊಱೆಯುಂ ಪರಿದಲ್ಲಿ ತದ್ದವಾಡಿಗೆ ತೆಂಕಲ್
ತೊಱಗಲೆಗೆ ಬಡಗಲಿರ್ದುದು
ನೆಱೆಯೆ ಸುಖೋದ್ದೀಪನಮೆನಿಸಿ ಬೆಳುಗಲಿ ದೇಶಂ ೨೨

ಬೆಳುಗಲಿಯಯ್ನೂಱರೊಳ
ಗ್ಗಳಮೆನಿಸುವ ಜಂಬುಖಂಡಿಯೆಬ್ಬೆತ್ತರ್ಕಂ
ತಿಳಕಮೆನೆ ನೆಗಳ್ದ ಮುದುವೊಳ
ಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ ೨೩

ಸಂದ ಪತಿವ್ರತಾಗುಣವಿಭೂಷಣದಿಂ ನೆಗೞ್ದತ್ತಿಮಬ್ಬೆ ತಾಯ್
ತಂದೆ ಜಿನೇಂದ್ರ ಪಾದಕಮಲಭ್ರಮರಂ ಜಿನವಲ್ಲಭೇಂದ್ರನ
ಣ್ಣಂ ದೃಢಬಾಹುರೇಚಣನುದಾರಗುಣಂ ಗುಣಿ ಮಾರಮಯ್ಯನೆಂ
ದಂದೆ ವಣಿಕ್ಕುಳಾರ್ಕನೆನಿಸಿತ್ತೆಸಕಂ ಕವಿಚಕ್ರವರ್ತಿಯಾ ೨೪

ಗುರುಗಳಜಿತಸೇನಾಚಾರ್ಯರಿಂದ್ರಾದಿವಂದ್ಯಾ
ಚರಿತರಜಿತಶೌರ್ಯಸ್ವಾಮಿ ಚಾವುಂಡರಾಯಂ
ವರದನಜಿತನಾಥಂ ಸತ್ಯನೆಂದಂದು ರತ್ನಂ
ಬರೆಗಮಧಿಕಪುಣ್ಯಂ ನೋಡೆಯೇಂ ನೋಂತನಾವೊಂ ೨೫

ಸಂತತದೇವಭಕ್ತಿಪಿತೃಭಕ್ತಿಗುಣಂಗಳೆ ಭೂಷಣಂಗಳಿ
ರ್ಪಂತೆಸೆದಿರ್ಪಿನಂ ತನಗೆ ಧರ್ಮಕುಲೋಚಿತಶುದ್ಧವೃತ್ತಿಯಿಂ
ಕಾಂತೆಯರೊಳ್ಗುಣಂಬಡೆದ ಧರ್ಮದ ಪೆರ್ಮೆಗೆ ನೋಂತ ಜಕ್ಕಿಯುಂ
ಶಾಂತಿಯುಮೆಂಬರಿರ್ವರೆ ಕುಲಾಂಗನೆಯರ್ ಕವಿಚಕ್ರವರ್ತಿಯಾ ೨೬

ಇವನು ಹುಟ್ಟಿದ್ದು, ಈಗ ನಾವು ಉತ್ತರ ಕರ್ನಾಟಕ ಎನ್ನುತ್ತೇವೆ ಯಲ್ಲಾ, ಆ ಪ್ರಾಂತ್ಯಕ್ಕೆ ಸೇರಿದ ಬೆಳುಗರೆ ನಾಡಿನಲ್ಲಿ.

ಹುಟ್ಟಿದ್ದು ಬೆಳುಗರೆ ನಾಡಿನಲ್ಲಿ, ಬಳೆಗಾರರ ಮನೆಯಲ್ಲಿ. ತನ್ನ

ಬದುಕಿನಿಂದ, ಬರಹದಿಂದ ಬೆಳಗಿದ್ದು ಜೈನಧರ್ಮವನ್ನು. ಕವಿಯಾಗಿ ತಾನು ಬಾಳಿದ್ದು ಮಂಡಲೇಶ್ವರರ, ಚಕ್ರೇಶ್ವರರ ಆಶ್ರಯದಲ್ಲಿ.

ಈ ಬೆಳುಗರೆ ಎಂಬ ನಾಡಿನಲ್ಲಿ ಜೆಳುಗಲಿ ಎಂದು ದೇಶ. ಅಲ್ಲಿ ಪ್ರಸಿದ್ಧವಾದ ಗಟ್ಟಗೆಯೆಂಬ ದೊಡ್ಡ ತೊರೆ ಹರಿಯುವ ಕಡೆ, ತದ್ದವಾಡಿಗೆ ದಕ್ಷಿಣವಾಗಿ, ತೊಜಗಲೆಗೆ ಉತ್ತರವಾಗಿ ಇರುವುದೇ ಸುಖವನ್ನು ಕೆರಳಿಸುವ ಬೆಳುಗಲಿ ದೇಶ.

ಬೆಳುಗಲಿ ೫೦೦ರಲ್ಲಿ ಶ್ರೇಷ್ಠವಾದದ್ದು ಜಂಬುಖಂಡಿ ೭೦. ಅದರಲ್ಲಿ ಮುಖ್ಯವಾದದ್ದು ಪ್ರಸಿದ್ಧವಾದ ಮುದುವೊಳಲು. ಇದೇ ರನ್ನನ ತವರೂರು. ಇವನು ಹುಟ್ಟಿ ಆ ಊರಿಗೆ ಹೆಸರು ತಂದನು.

ಇವನ ತಾಯಿ—ಪತಿಭಕ್ತೆಯಾದ ಅತ್ತಿಮಬ್ಬೆ. ತಂದೆ ಜಿನಭಕ್ತನಾದ ಜಿನವಲ್ಲಭೇಂದ್ರ. ರೇಚಣ ಮಾರಮಯ್ಯ ಎಂಬುವರು ಅಣ್ಣಂದಿರು. ಈ ವಣಿಗ್ವರರ ಕುಲದಲ್ಲಿ ರತ್ನನು ಸೂರ್ಯನಂತೆ ಹುಟ್ಟಿದನು.

ಇವನಿಗೆ ಗುರುಗಳು—ಇಂದ್ರನಿಂದ ಪೂಜೆಗೊಳುವ ಅಜಿತಸೇನಾ ಚಾರ್ಯರು. ಸ್ವಾಮಿ—ಅಜೇಯನಾದ ಚಾವುಂಡರಾಯ. ಅಜಿತತೀರ್ಥಂಕರ ಸ್ವಾಮಿ ಇವನಿಗೆ ವರದನಾಗಿದ್ದಾನೆ. ರತ್ನನ ಪುಣ್ಯವೇ ಪುಣ್ಯ!

ರತ್ನನಿಗೆ ಪತ್ನಿಯರು ಇಬ್ಬರು—ಜಕ್ಕಿ ಮತ್ತು ಶಾಂತಿ.

ರತ್ನನಿಗೆ ಇಬ್ಬರು ಮಕ್ಕಳು : ಮೊದಲನೆಯ ಗಂಡು ಮಗುವಿಗೆ, ತನಗೆ ಪೋಷಣೆ ಕೊಟ್ಟ ಚಾವುಂಡರಾಯನ ಜ್ಞಾಪಕಾರ್ಥವಾಗಿ ಇಟ್ಟ ಹೆಸರು, **ರಾಯ;** ಎರಡನೆಯ ಮಗಳಿಗೆ, ತನಗೆ ಆಶ್ರಯಕೊಟ್ಟ ದಾನಚಿಂತಾಮಣಿ ಅತ್ತಿಮಬ್ಬೆಯ ನೆನಪಿಗಾಗಿ ಇಟ್ಟ ಹೆಸರು, **ಅತ್ತಿಮಬ್ಬೆ.** 'ನಿಜವರ್ಣೋತ್ತಮೆ ಯತ್ತಿಮಬ್ಬೆ ಕವಿರತ್ನಾಂಭೋಧಿಯೊಳ್ ಲಕ್ಷ್ಮಿವೋಲ್' ಪುಟ್ಟಿದಳಂತೆ.

ನೆಗಲ್ದವರಿರ್ವರ ಪೆಸರ್ಗಂ
ನೆಗಲ್ದುವು ತನ್ನೆರಡುಮುದ್ಧಕೃತಿಗಳ್ ರಾಯಂ
ಮಗನತ್ತಿಮಬ್ಬೆ ಮಗಳೆನೆ
ನೆಗಟ್ದಂ ಸಂತಾನವೃದ್ಧಿಯಿಂ ಕವಿರತ್ನಂ ೨೭

೫

ನೋಡು, ಈ '**ಶ್ರೀ ಕವಿರತ್ನ**' ಎನ್ನುವ ಬರಹ ಹತ್ತನೆಯ ಶತಮಾನದ ಬರಹ ಎಂದೆನಲ್ಲಾ. ಈ ಕವಿಯು ಈ **ಐದಕ್ಷರದ ಐಶ್ವರ್ಯ** ಎಲ್ಲಿ ಇದೆ ಗೊತ್ತೆ?

ಶ್ರವಣಬೆಳುಗೊಳ ಎಂದು ಕೇಳಿದ್ದೀಯಲ್ಲಾ, ಗೊಮ್ಮಟೇಶ್ವರನ ಮಹಾಮೂರ್ತಿ ಇರುವ ಯಾತ್ರಾಸ್ಥಳ . . . ಅಲ್ಲಿ ಎರಡು ಬೆಟ್ಟ ಇವೆ . . . ಒಂದು ದೊಡ್ಡ ಬೆಟ್ಟ— ಅದರ ತುದಿಗೇ ಗೊಮ್ಮಟ ಇರುವುದು . . . ಅದರ ಎದುರಿಗೆ ಚಿಕ್ಕ ಬೆಟ್ಟ—ಅದರ ಮೇಲೆಯೇ ಈ ಶಾಸನ '**ಶ್ರೀ ಕವಿರತ್ನ**' ಎಂಬುದು ಇರುವುದು.

## ೨. ರನ್ನನ ಸಾಹಸಭೀಮವಿಜಯ

ರನ್ನನ ಹೆಸರಿಗೆ ಸಂಬಂಧಿಸಿದ ಮತ್ತೆ ಏನನ್ನೂ ತಿಳಿಯದವರು ಕೂಡ ಅವನ **'ಗದಾಯುದ್ಧ'**ದ ಹೆಸರನ್ನಾದರೂ ಕೇಳಿರುತ್ತಾರೆ. ಈ 'ಗದಾಯುದ್ಧ'ಕ್ಕೆ ಕವಿ ಇಟ್ಟ ಹೆಸರು **'ಸಾಹಸಭೀಮವಿಜಯ'.**

ಕರ್ಣಾಟಕದ ಸಕಲ ಚಕ್ರವರ್ತಿಯಾದ ಪಡುವಣ ಚಾಲುಕ್ಯ ಆಹವಮಲ್ಲ ತೈಲಪನು (ಕ್ರಿ. ಶ. ೯೭೩—೯೯೭) ಆದ ಮೇಲೆ ಅವನ ಮಗನಾದ ಸತ್ಯಾಶ್ರಯನು (೯೯೭—೧೦೦೯) ಚಕ್ರವರ್ತಿಯಾಗಿದ್ದನು. ಇವನ ಆಶ್ರಯದಲ್ಲಿ ರನ್ನನು, ಇವನನ್ನು ಮಹಾಭಾರತದ ಭೀಮನಿಗೆ ಹೋಲಿಸಿ, 'ಸಾಹಸಭೀಮವಿಜಯ'ವನ್ನು ಬರೆದನು.

ಸತ್ಯಾಶ್ರಯನೆಂದರೆ ರನ್ನನಿಗೆ ತುಂಬ ಅಭಿಮಾನ. ಸತ್ಯಾಶ್ರಯನು

ಬರೆ ಗರ್ಭಕ್ಕರಿವಸ್ತುವಾಹನಚಯಂ ಕಯ್ಗೆಯ್ದುವಂದತ್ತು ಪು  
ಟ್ಟೆ ರಣೋತ್ಸಾಹದೆ ಚಕ್ರವರ್ತಿವಿಭವಂ ಪುಟ್ಟಿತ್ತು ಕಯ್ವತ್ತಿ ನಿಂ  
ದಿರೆ ಪತ್ತಿತ್ತು ಸಮಸ್ತಧಾತ್ರಿ [ಬಳೆಯಲ್ಕೆಂತುಂ] ದಿಶಾದಂತಿಗ  
ಳ್ಗರೆಗಂ ತಂದೆಯ ಕೀರ್ತಿ[ಯುಂ]ಬಳೆದು[ದೇಂ]ಸತ್ಯಾಶ್ರಯಂ ಧನ್ಯನೋ ೧

ದೊರೆಯಾದುದು ದುರ್ಯಶದೊಳ್  
ಪೊರೆಯುವ ಚರಿತಂ ಪುರಾಣಪುರುಷಚರಿತದೊಳ್  
ಅರರೆ ಅಕಲಂಕಚರಿತಂ  
ದೊರೆಯಾದುದೊ ಸಕಲಸತ್ಯಚಕ್ರೇಶ್ವರನಾ ೨

ಬೆಳಗುವ ಸೊಡರೊಳ್ ಸೊಡರಂ  
ಬೆಳಗಿ ಪಲಕೊರ್ಂಡು ಪೋಗೆಯುಂ ಕುಂದದೆ ಪ  
ಜ್ಜಳಿಸುವವೊಲ್ ಜಗಮೆಲ್ಲಂ  
ಕೊಳಲುಂ ತವದಿತ್ತು ಮೆಱೆವನಿಱಿವ ಬೆಡಂಗಂ ೩

ಎನಿಸಿದ ಸತ್ಯಾಶ್ರಯದೇ
ವನೆ ಪೃಥ್ವೀವಲ್ಲಭಂ ಕಥಾನಾಯಕನಾ
ಗನಿಲಜನೊಳ್ಪೋಲಿಸಿ ಪೇ
ಳ್ದನೀ ಗದಾಯುದ್ಧಮಂ ಮಹಾಕವಿ ರನ್ನಂ ೪

ಕೃತಿ ನೆಗಳ್ದ ಗದಾಯುದ್ಧಂ
ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ
ಕೃತಿಯಂ ವಿರಚಿಸಿದನಲಂ
ಕೃತಿಯಂ ಕವಿರತ್ನನೆಂದೊಡೇವಣ್ಣಿಪುದೋ ೫

ಮೊದಲೊಳ್ ಬದ್ಧವಿರೋಧದಿಂ ನೆಗಳ್ದ ಕುಂತೀಪುತ್ರರೊಳ್ ಭೀಮನಂ
ಕದ ಗಾಂಧಾರಿಯ ಪುತ್ರರೊಳ್ಮೊದಲಿಗಂ ದುರ್ಯೋಧನಂ ಧರ್ಮಯು
ದ್ಧದೊಳಂತಾತನನಿಕ್ಕಿ ಕೊಂದನದಱಂ ಭೀಮಂ ಜಯೋದ್ದಾಮನೆಂ
ಬುದನೆಂಬಂತಿದು ವಸ್ತು ಯುದ್ಧಮೆನಿಸಲ್ಪೇಳ್ದಂ ಗದಾಯುದ್ಧಮಂ ೬

ಒಳಪೊಕ್ಕು ನೋಡೆ ಭಾರತ
ದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂ
ತೊಳಕೊಂಡತ್ತೆನೆ ಸಿಂಹಾ
ವಳೋಕನಕ್ರಮದಿನಱಪಿದಂ ಕವಿರನ್ನಂ ೭

ವನರುಹಭವನೆನಿಸಿದ ದಂ
ಡನಾಯಕಂ ಕೇಶಿ ತಿರ್ದೆ ಪೇಳ್ದಂ ಕವಿ ರ
ನ್ನನ ಪೇಳ್ದ ಕೃತಿ ಯಶಶ್ರೀ
ವನಿತೆಗಲಂಕೃತಿಯೆನಿಪ್ಪುದೊಂದಚ್ಚರಿಯೇ ೮

ಹೀಗೆ, ತನ್ನ ಕಾಲದ ಅರಸನನ್ನು ಪುರಾಣಕಾಲದ ಪುರುಷನಿಗೆ ಹೋಲಿಸಿ ಬರೆದನಲ್ಲಾ, ಈ ಗದಾಯುದ್ಧದ ಸ್ವರೂಪ ಎಂತಹದು?

ಮೊದಲೊಳ್ ಶಂತನುಸೂನು ಪತ್ತುದಿವಸಂ ಚಾಪಾಗಮಾಚಾರ್ಯನ
ಯ್ದುದಿನಂ ಭಾಸ್ಕರನಂದನಂ ದಿನಯುಗಂ ಶಲ್ಯಂ ಭರಂಗೆಯ್ದೊಡಾ
[ದ ದಿನಾರ್ಧಂ ದಿನದರ್ಧದಂದಿನ] ಗದಾಯುದ್ಧಂ ಪರಿಚಿನ್ನವಿಂ
ತು ದಿನಂಗಳ್ ಪದಿನೆಂಟಱಂ ಸಮೆದುದಾ ರೌದ್ರಾಹವಂ ಭಾರತಂ ೯

ಭೀಷ್ಮ ಹತ್ತುದಿನ, ದ್ರೋಣ ಐದು ದಿನ, ಕರ್ಣ ಎರಡು ದಿನ, ಶಲ್ಯ ಅರ್ಧ ದಿನ, ಒಟ್ಟು ಹದಿನೇಳೂವರೆ ದಿನ ಮುಗಿದಿದೆ. ತನ್ನ ಮಕ್ಕಳು, ತಮ್ಮಂದಿರು, ಕೆಳೆಯ ರಾಧೇಯ, ಇನ್ನಿತರ ಬಂಧುವರ್ಗ ಎಲ್ಲರನ್ನೂ ಕಳೆದು ಕೊಂಡಿದ್ದರೂ ದುರ್ಯೋಧನ ಇನ್ನೂ ಬದುಕಿದ್ದಾನೆ. ಅಲ್ಲಿಂದ, ಹದಿನೆಂಟನೆಯ ದಿವಸದ ಕಡೆಯ ಅರ್ಧದಿಂದ ಆರಂಭವಾಗುತ್ತದೆ—ಈ ಸಾಹಸಭೀಮವಿಜಯ ಅಥವಾ ಗದಾಯುದ್ಧ.

ಇಲ್ಲಿ ಕತೆ ಹೇಗೆ ಬರುತ್ತದೆ, ನೋಡೋಣ.

ದುಶ್ಶಾಸನ ಸತ್ತರೂ ದುರ್ಯೋಧನ ಇನ್ನೂ ಬದುಕಿರುವನಲ್ಲಾ ಎಂದು ದ್ರೌಪದಿಗೆ ತುಂಬಾ ಮನಸ್ತಾಪ. ಅದು ಆರುವಂತೆ ಭೀಮ ಮತ್ತೊಮ್ಮೆ ಪ್ರತಿಜ್ಞೆ ಮಾಡುತ್ತಾನೆ: ದುರ್ಯೋಧನನ ತೊಡೆ ಒಡೆಯುತ್ತೇನೆ, ಅವನ ಕಿರೀಟವನ್ನು ಒದೆಯುತ್ತೇನೆ, ಎಂದು. ಇದು ಇತ್ತ, ಪಾಂಡವರ ಕಡೆ.

ಅತ್ತ ದುರ್ಯೋಧನನು ರಣದಲ್ಲಿ ತನ್ನ ಕಡೆ ಸತ್ತು ಬಿದ್ದವರನ್ನು ಜ್ಞಾಪಿಸಿಕೊಂಡು, ದ್ರೋಣಾಶ್ವತ್ಥಾಮರು ಪಾಂಡವಪಕ್ಷಪಾತಿಗಳು ಎಂದು ಆಕ್ಷೇಪಿಸುತ್ತಾನೆ. ಜೊತೆಗೆ ಬಂದ ಸಂಜಯನು ಅದಕ್ಕೆ ಸಮಾಧಾನವಾಗಿ ಭೀಮಾರ್ಜುನರ ಮಹಾ ಪರಾಕ್ರಮವನ್ನು ವರ್ಣಿಸುತ್ತಾನೆ. ಅದನ್ನು ಕೇಳಿ, ಕೌರವನು ಕೆರಳಿ ಕಿಡಿಕೆದರುವ ವೇಳೆಗೆ, ಅವನ ಕಣ್ಣು ಕಾಣದ ತಾಯಿತಂದೆ ಅವನನ್ನು ಅರಸಿಕೊಂಡು ಅಲ್ಲಿಗೆ ಬರುತ್ತಾರೆ; ಈಗಲಾದರೂ ಸಂಧಿಮಾಡಿಕೊ, ಎಂದು ಬೇಡುತ್ತಾರೆ. ತನ್ನವರನ್ನೆಲ್ಲಾ ಕಳೆದುಕೊಂಡು ಏಕಾಕಿಯಾಗಿರುವ ದುರ್ಯೋಧನನಿಗೆ ಸಂಧಿಯ ಮಾತು ಸೇರದು. ಕಡೆಗೆ ಅಜ್ಜನ ಸಲಹೆ ಯನ್ನಾದರೂ ಹೋಗಿ ಕೇಳು, ಎಂದು ಆ ತಾಯಿತಂದೆ ಅವನನ್ನು ಭೀಷ್ಮರ ಬಳಿಗೆ ಕಳಿಸುತ್ತಾರೆ.

ಶರಶಯನದಲ್ಲಿರುವ ಭೀಷ್ಮರ ಬಳಿಗೆ ದುರ್ಯೋಧನನು ಬರುತ್ತಿರುವಾಗ,

ಅವನ ದಾರಿಗೆ ಅಡ್ಡವಾಗಿ ಕೆಲವು ಮರುಳುಗಳು ಬಂದು, ಅವನು ಪಾಂಡವರಿಗೆ ಮಾಡಿದ ಅನ್ಯಾಯಗಳನ್ನು ಎತ್ತಿ ಆಡಿ, ಭೀಮನಿಂದ ಊರುಭಂಗವಾಗುವು ದೆಂದು ಕಠೋರವಾಗಿ ನುಡಿದು ಹೋಗುವುವು.

ಮುಂದೆ ಹೋಗುವಾಗ, ಅದೇ ರಣರಂಗದಲ್ಲಿ ದ್ರೋಣ, ಅಭಿಮನ್ಯು, ಲಕ್ಷಣ, ಶಲ್ಯ, ಸಿಂಧುರಾಜ, ಶಕುನಿ, ದುಶ್ಶಾಸನ, ಕರ್ಣ ಇವರ ದೇಹಗಳು ಎದುರಿಗೆ ಸಿಕ್ಕುತ್ತವೆ. ಅದುವರೆಗೆ ದ್ರೋಣರನ್ನು ಪಾಂಡವಪಕ್ಷಪಾತಿಯೆಂದು ನಿಂದಿಸುತ್ತಿದ್ದ ಸುಯೋಧನನು ಈಗ ಗುರುವನ್ನು ಕಂಡೊಡನೆ ಅವರನ್ನು ಈ ದುರ್ದೆಸೆಗೆ ತಂದವನು ತಾನು ಎಂದು ತನ್ನನ್ನೇ ನಿಂದಿಸಿಕೊಳ್ಳುತ್ತಾನೆ. ಶತ್ರು ಪುತ್ರನಾದ ಅಭಿಮನ್ಯುವನ್ನು ಕಂಡಾಗ ಮೆಚ್ಚಿ, ಅವನಿಗೆ ಬಂದಂಥ ವೀರ ಮರಣದಲ್ಲಿ ಒಂದು ಪಾಲಾದರೂ ತನಗೆ ಬರಲಿ ಎಂದು ಬಯಸುತ್ತಾನೆ. ಲಕ್ಷಣಕುಮಾರನನ್ನು ಕಂಡಾಗ, ಒಡನೆ ದುರ್ಯೋಧನ ದುಃಖದ ಸುಳಿಗೆ ಸಿಕ್ಕಿ ಬೀಳುತ್ತಾನೆ. ಲಕ್ಷಣಕುಮಾರ ಅವನ ಮುದ್ದುಮಗ. ಶಲ್ಯ ಶಕುನಿ ಸಿಂಧು ರಾಜರನ್ನು ದಾಟಿ ಮುಂದೆ ಬಂದರೆ, ದುಶ್ಶಾಸನನ ದೇಹ! ದುಃಖದ ಸುಳಿಗೆ ಸಿಕ್ಕಿದವನು ಈಗ ಗಿರಗಿರನೆ ಸುತ್ತಿಹೋಗುತ್ತಾನೆ. ದುಶ್ಶಾಸನ ಅವನ ಅಣುಗದಮ್ಮ! ಮುಂದೆ ಅಂಗರಾಜನಿದ್ದಾನೆ ಕರ್ಣ—'ನೆಮ್ಮಿ ನಿಜೋನ್ನತ ಕೇತುದಂಡಮಂ.' ಇಲ್ಲಿಗೆ ದುಃಖದ ಸುಳಿ ದುರ್ಯೋಧನನನ್ನು ತನ್ನ ಬಸಿರಿಗೆ ಹೀರಿಕೊಳ್ಳುತ್ತದೆ. ಸಂಜಯನು ಪಕ್ಕದಲ್ಲಿಯೇ ಇದ್ದು ಸಂತೈಸಿ, ಅವನ ಛಲವನ್ನು ಜ್ಞಾಪಿಸಿಕೊಟ್ಟನೋ, ದುರ್ಯೋಧನ ಸುಳಿಯಿಂದ ಬದುಕಿ ಮೇಲೆದ್ದು ಬಂದನೋ!

ಬಂದುದಾಯಿತು—ಭೀಷ್ಮರ ಬಳಿಗೆ. ಅವರಾದರೂ ಅದೇ ಮಾತು—ಪಾಂಡವರೊಡನೆ ಈಗಲಾದರೂ ಸಂಧಿ ಮಾಡಿಕೊ. ದುರ್ಯೋಧನನಿಗೆ ಅದು ಮಾತ್ರ ಸೇರದು. ಅವನದಾದರೂ ಒಂದೇ ಹಠ—ಭೀಮನ ಬಸಿರಿನಿಂದ ದುಶ್ಶಾಸನನನ್ನು ಸಾಧಿಸುತ್ತೇನೆ, ಅರ್ಜುನನ ಬಸಿರಿನಿಂದ ಕರ್ಣನನ್ನು ಸಾಧಿಸು ತ್ತೇನೆ, ಅನಂತರ ಯಮಜನೊಡನೆ ಸಂಧಿಯಾದರೆ ಆಗಲಿ, ಎಂದು. ಹೇಗೂ ಮೊಮ್ಮಗ ಸಂಧಿಯ ಮಾತಿಗೆ ಒಪ್ಪುವುದಿಲ್ಲವೆಂದು, ಭೀಷ್ಮರು, ಮೈತ್ರೇಯರ ಶಾಪ ಮುಗಿಯುವ ವರೆಗಾದರೂ ವೈಶಂಪಾಯನ ಸರೋವರದಲ್ಲಿ ತಲೆ ಮರೆಸಿ ಕೊಂಡಿರು ಎಂದು ಜಲಮಂತ್ರವನ್ನು ಉಪದೇಶಮಾಡಿ ಒಪ್ಪಿಸುತ್ತಾರೆ.

ಅವಿತುಕೊಳ್ಳುವುದಕ್ಕೆ ಇಷ್ಟವಿಲ್ಲದಿದ್ದರೂ ಅಜ್ಜನ ಮಾತಿಗೆ ಮನ್ನಣೆ ಕೊಟ್ಟು, ತನ್ನ ಛಲವನ್ನು ಮೆರೆಯಬೇಕೆಂಬ ಉದ್ದೇಶದಿಂದ, ಸುಯೋಧನನು ಹೋಗಿ, ಜಲಸ್ತಂಭನವಿದ್ಯೆಯಿಂದ ಕೊಳದಲ್ಲಿ ಇಳಿದು ಮರೆಯಾಗುತ್ತಾನೆ.

ಇತ್ತ, ಭೀಮನಾದರೋ, ದುರ್ಯೋಧನನಿಗಾಗಿ ಯುದ್ಧಭೂಮಿಯನ್ನೆಲ್ಲಾ ಶೋಧಿಸಿಬಿಟ್ಟಿದ್ದಾನೆ. ಅವನು ಸಿಕ್ಕಿಲ್ಲವೆಂದು ಆ ವಾಯುವಿನ ಮಗನು ಬೆಂಕಿಯಾಗಿದ್ದಾನೆ. ಅಷ್ಟು ಹೊತ್ತಿಗೆ ಯಾರೋ ಕಿರಾತರು ಬರುತ್ತಾರೆ, ವೈಶಂಪಾಯನ ಕೊಳದ ತಡಿಯಲ್ಲಿ ಹೊರಗೆ ಹೊರಟ ಹಜ್ಜೆಗಳನ್ನು ಅವರು ಕಂಡಿದ್ದಾರಂತೆ. ಕೇಳಿದ್ದೇ ತಡ, ಭೀಮನೂ ಪಾಂಡವರೂ ಕೃಷ್ಣನೂ ಅಲ್ಲಿಗೆ ಧಾವಿಸುತ್ತಾರೆ. ಅದು ದುರ್ಯೋಧನನದೇ ಹಜ್ಜೆ. ಹಿಂದು ಹಿಂದಾಗಿ ಹೋಗಿ ಕೊಳ ಹೊಕ್ಕಿದ್ದಾನೆ. ಅದನ್ನು ಕಂಡು ಧರ್ಮರಾಯ ತಲೆ ತಗ್ಗಿಸುತ್ತಾನೆ. ದುರ್ಯೋಧನನನ್ನು ಒಳ್ಳೆಯ ಮಾತಿನಿಂದ ಹೊರಗೆ ಕರೆಯುತ್ತಾನೆ. ಅರ್ಜುನನೂ ಕೃಷ್ಣನೂ ಯಮಳರೂ ಅವನನ್ನು ಮೂದಲಿಸುತ್ತಾರೆ. ಅವನು ಈಷತ್ತೂ ಮಿಡುಕುವುದಿಲ್ಲ. ಆಗ ಭೀಮ, ಈ ಬೂತು ನನ್ನ ಸ್ವರ ಕೇಳಿದಲ್ಲದೆ ಹೊರಗೆ ಬರದು ಎಂದು ಅವನನ್ನು ತಾನು ಮೂದಲಿಸುತ್ತಾನೆ. ಆಗ ಆ ಉರಗಪತಾಕನು ಅವನ ಧ್ವನಿಯನ್ನು ಕೇಳಿ, ನೀರೊಳಗಿದ್ದರೂ ಕೋಪದಿಂದ ಬೆವರಿ, ಈಚೆಗೆ ಬಂದನಂತೆ! ಹೇಗೆ!

ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲಂತಾ ಸರೋಮಧ್ಯದಿಂ ಸಾ
ಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱಮಟ್ಟೆಲ್ಲಿದಂ ಭೀಮನೆಂದೆ
ಣ್ದೆಸೆಯಂ ನೋಡುತ್ತೆ ಮತ್ತದ್ಭುತನಟನಿಟಿಲಾಲೋಲ ಕೀಲಾಕ್ಷಿವೊಲ್ ದ
ಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯುಂ ತೂಗಿದಂ ಧಾರ್ತರಾಷ್ಟ್ರಂ ೧೦

ಸರಿ, ಸಂಜೆ ಮುಗಿಯುವ ವರೆಗೂ ಸರೋವರದಲ್ಲಿರುವ ಮಾತು ಹಾರಿ ಹೋಯಿತು. ಆಹೊತ್ತಿಗೆ, ತೀರ್ಥಯಾತ್ರೆಯಿಂದ ಬಲರಾಮನು ಬರುತ್ತಾನೆ. ಅವನ ನೇತೃತ್ವದಲ್ಲಿಯೇ ಭೀಮದುರ್ಯೋಧನರ ಗದಾಯುದ್ಧಕ್ಕೆ ಸಿದ್ಧತೆಯಾಗುತ್ತದೆ. ಗದಾಯುದ್ಧದಲ್ಲಿ ಭೀಮ ಒಮ್ಮೆ ಮೂರ್ಛೆ ಬಿದ್ದು, ದುರ್ಯೋಧನನ ಗದೆಯ ಗಾಳಿಯಿಂದ ಎಚ್ಚರಗೊಳ್ಳುತ್ತಾನೆ. ಕಡೆಗೆ, ಕೃಷ್ಣನು ಸೂಚಿಸಿಕೊಟ್ಟ ಮೇರೆಗೆ, ದುರ್ಯೋಧನನ ತೊಡೆಯನ್ನು ಗದೆಯಿಂದ ಒಡೆದು,

ಕೆಳಗೆ ಬಿದ್ದ ಅವನ ಕಿರೀಟವನ್ನು—ಬಲದೇವಾದಿಗಳು ಬೇಡಬೇಡವೆನ್ನು ತ್ತಿದ್ದರೂ ಕೇಳದೆ—ಒದೆದು, ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಳ್ಳುತ್ತಾನೆ. ದ್ರೌಪದಿಯನ್ನು ಕರೆದು, ಪ್ರತಿಜ್ಞೆ ನೆರವೇರಿದುದನ್ನು ತೋರಿಸಿ, ಅವಳಿಗೆ ವೇಣೀಸಂಹಾರವನ್ನು ಮಾಡುತ್ತಾನೆ.

ಹೀಗೆ ಭಂಗಹೊಂದಿದ ಕುರುರಾಜನನ್ನು ಬಿಟ್ಟು ಎಲ್ಲರೂ ಹೋದ ಹೊತ್ತಿಗೆ ಅಶ್ವತ್ಥಾಮನು ಬರುತ್ತಾನೆ. ಪಾಂಡವರ ಕಡೆಗೆ ನಡೆದು ಹೋಗುತ್ತಿ ರುವ ಕುರುರಾಜಲಕ್ಷ್ಮಿಯನ್ನು ತರ್ಜಿಸಿ ತಡೆದು, ಮತ್ತೆ ಅವಳನ್ನು ಕೌರವನ ಊಳಿಗಕ್ಕೇ ನೇಮಿಸಿ, ಕೌರವನ ತೃಪ್ತ್ಯರ್ಥವಾಗಿ ಪಾಂಡವರ ತಲೆಗಳನ್ನು ತರು ತ್ತೇನೆಂದು ಹೋಗುತ್ತಾನೆ. ಹೋದವನು ಅವಿಚಾರಿಯಾಗಿ ಪಾಂಡವರ ಮಕ್ಕ ಳೈವರ ತಲೆಗಳನ್ನು ತಂದುಬಿಡುತ್ತಾನೆ. ದುರ್ಯೋಧನನು ಅದನ್ನು ಕಂಡು, ತನ್ನ ಹಗೆ ತೀರಲಿಲ್ಲವಲ್ಲಾ, ವೃಥಾ ಬಾಲವಧವಾಯಿತಲ್ಲಾ ಎಂದು ಮರುಗಿ, ಸೂರ್ಯನು ಅಸ್ತಮಿಸುವ ಹೊತ್ತಿಗೆ ಸರಿಯಾಗಿ ಜೊತೆಯಲ್ಲೆ ತಾನೂ ಅಸ್ತಮಿಸುತ್ತಾನೆ.

ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇ
ಜಂ ಕಿಡುತಿರ್ಪಿನಂ ನಿಜಕರಂಗಳನಂದುಡುಗುತ್ತುಮಿರ್ಪ ಚ
ಕ್ರಾಂಕಮುಗಲ್ಪಿನಂ ಕ್ರಮದಿನಂಬರಮಂ ಬಿಸುಟುರ್ವಿಗಂಧಕಾ
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ ೧೧

ಇಲ್ಲಿಗೆ ಗದಾಯುದ್ಧ ಮುಗಿಯಿತು.
ಆದರೆ ಸಾಹಸಭೀಮವಿಜಯ ಮುಗಿದಿಲ್ಲ.

ಮುಂದೆ—ಕೌರವನ ಲಕ್ಷ್ಮಿ ಪಾಂಡವರ ಕಡೆಗೆ ಬರುತ್ತಾಳೆ. ಭೀಮನಿಗೆ ಪಟ್ಟಾಭಿಷೇಕವಾಗುತ್ತದೆ. ದ್ರೌಪದಿ ಅವನ ಪಟ್ಟದ ರಾಣಿಯಾಗುತ್ತಾಳೆ.

ಹೀಗೆ—

ಶ್ರೀಯಂ ಕುರುಭೂಭೃದ್ಬಲ
ತೋಯಧಿಯೊಳ್ ಕಡೆದು ಪಡೆದು ಭುಜಮಂ[ದರ] ದಿಂ
ದಾಯಾದಮಲ್ಲನೆನಿಸಿದ
ಜೇಯಂ ಭುಜಬಲವಿಭಾಸಿ ಸಾಹಸಭೀಮಂ ೧೨

ಎನ್ನಿಸಿದವನ ಪ್ರತಿಜ್ಞಾಪೂರಣದ ಕಥೆಯೇ ಈ ಗದಾಯುದ್ಧ.

ಸಂಸ್ಕೃತದಲ್ಲಿ ವ್ಯಾಸರು ಕಂಡ ಭಾರತದ ಕಥೆಯನ್ನು ಕನ್ನಡದಲ್ಲಿ ಕಂಡ ಕವಿಪರಂಪರೆಯಲ್ಲಿ ರನ್ನ ಎರಡನೆಯವನು. ತನಗಿಂತ ಹಿಂದಿನವನಾದ ಪಂಪನ ಹಜ್ಜೆಯಲ್ಲೆ ನಡೆದವನು. ಅಲ್ಲಿ ಅವನು, ಆ ಪಂಪ, ತನ್ನ 'ವಿಕ್ರಮಾರ್ಜುನ ವಿಜಯ'ವೆಂಬ ಪಂಪಭಾರತದಲ್ಲಿ 'ಪೋಲಿಪೊಡೆ ಎನಗೆ ಅಱ್ಱಿಯಾದುದು ಗುಣಾರ್ಣವಭೂಭುಜನಂ ಕಿರೀಟಿಯೊಳ್' ಎಂದು ತನ್ನ ರಾಜನಾದ ಚಾಲುಕ್ಯರ ಅರಿಕೇಸರಿಯನ್ನು ಮಹಾಭಾರತದ ಅರ್ಜುನನಿಗೆ ಹೋಲಿಸಿ ತನ್ನ 'ಸಮಸ್ತ ಭಾರತ'ವನ್ನು ಬರೆದರೆ; ಇಲ್ಲಿ ಇವನು, ಈ ರನ್ನ, ತನ್ನ 'ಸಾಹಸ ಭೀಮವಿಜಯ'ವೆಂಬ ಗದಾಯುದ್ಧದಲ್ಲಿ ತನ್ನ ಅರಸನನ್ನು ಅನಿಲಜನಿಗೆ ಹೋಲಿಸಿದನು. ಅಲ್ಲಿ ಆ ಪಂಪ ಅರ್ಜುನನೇ ತನ್ನ ನಾಯಕ ಎಂದು ಸಾರಿ ಹೊರಟರೂ, ಬರುತ್ತ ಬರುತ್ತ ಪ್ರತಿನಾಯಕನಾದ ಕರ್ಣನಿಗೇ ತಾನು ಕರಗಿ 'ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನ್; ಒಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ' ಎನ್ನುವಷ್ಟರ ಮಟ್ಟಿಗೆ ಮೈಮರೆತು ಹೋಗಿಬಿಟ್ಟ. ಇಲ್ಲಿ ರನ್ನನಾದರೂ ಅಷ್ಟೇ. ಭೀಮನು ನಾಯಕನಾದರೂ, ಅವನ ಮಿತಿ ಮೀರೆ ಯಿಲ್ಲದ ರೌದ್ರಕ್ಕಿಂತ ಹೆಚ್ಚು ವ್ಯಂಜಕವಾಗಿರುವುದು ದುರ್ಯೋಧನನ ದುರ್ದೆಸೆ ಯಿಂದ ಹುಟ್ಟಿಬರುವ ಕರುಣ. ಪಂಪನಲ್ಲಿ ಭಾರತವೆಂಬುದು ಕರ್ಣನ ಪಡೆಮಾತಿನಲ್ಲಿ ಪುದಿದು 'ಕರ್ಣರಸಾಯನ' ವೆನ್ನಿಸಿಕೊಂಡರೆ, ರನ್ನನ ಸಾಹಸಭೀಮವಿಜಯವಾದರೂ ಮೊದಲಿನಿಂದ ಕೊನೆಯವರೆಗೂ ದುರ್ಯೋ ಧನನ ಪಡೆಮಾತಿನಿಂದ ತುಂಬಿ ಹೋಗಿರುವುದೇ; ಹೃದಯದಲ್ಲಂತೂ ಕರ್ಣನೇ ಕರ್ಣ. ಹಾಗೇ ನೋಡಿದರೆ, ದುರ್ಯೋಧನ ಈ ರನ್ನನ ಭಾರತದಲ್ಲಿ ಉದ್ದಕ್ಕೂ ನದಿಯಂತೆ ಹರಿಯುತ್ತಿದ್ದರೆ, ಕರ್ಣ ಅದರ ನಡುವೆ ಎದ್ದು ನಿಂತಿರುವ ನಡು ಗಡ್ಡೆಯ ಕೋಡುಗಲ್ಲಿನಂತಿದ್ದಾನೆ. ಅಲ್ಲಿ ಕರ್ಣನ ವೀರ, ಕರ್ಣನ ಸತ್ಯ, ಕರ್ಣನ ದಾನ ತಾನೇತಾನಾಗಿ ಮೆರೆದರೆ—ಇಲ್ಲಿ ದುರ್ಯೋಧನನ ಬಂಧು ಪ್ರೇಮ, ದುರ್ಯೋಧನನ ಸ್ನೇಹ, ದುರ್ಯೋಧನನ ಅದಿರದ ಛಲ ತಾನೇ ತಾನಾಗಿದೆ. ಇಲ್ಲಿನ ದುರ್ಯೋಧನ ಮಹಾಭಾರತದಲ್ಲಿ ನಾವು ಕಾಣಲಾಗದ ಹೊಸ ದುರ್ಯೋಧನ. ಪಂಪಭಾರತದ ಮಹಾಚಿತ್ರದಿಂದ ಪ್ರತ್ಯೇಕಿಸಿ ತೆಗೆದು, ಹೊಸದಾದ ಮೆರಗು ಕೊಟ್ಟು, ಹಸನುಮಾಡಿದ ದುರ್ಯೋಧನ. ಅದೇ ಏಕಾಂಗ ಸಾಹಸ, ಅದೇ ಮಹಾಸತ್ತ್ವ; ಅದೇ ಅಭಿಮಾನಧನ, ಅದೇ ಸುಯೋಧನ.

ಆದರೆ ಮಾತ್ರ, ಅದೇ ಹಳೆಯ ವಿಗ್ರಹವನ್ನು ತಂದು ನಡಸಿರುವ ರಂಗ— ಸಂಪೂರ್ಣವಾಗಿ ರತ್ನನದೇ ಆದ ರತ್ನರಂಗ.

ಪಂಪನು ತಾನು ಕಂಡ ಭಾರತವನ್ನು ಹೇಳುವಾಗ—'ಕತೆಯ ಮೆಯ್ ಕಿಡಲೀಯದೆ . . . ಸಮಸ್ತ ಭಾರತಮಂ . . . ಅಪೂರ್ವಮಾಗೆ . . . ಪೆಱವುಂ ಉಪಾಖ್ಯಾನಕಥೆಗಳೊಳವೊಂದುಂ ಕುಂದಲೀಯದೆ . . .' ಹೇಳಿದನು. ರನ್ನನು ಅವನ ಗರಡಿಯಲ್ಲಿ ಕಲಿತವನು.

ದುರ್ಯೋಧನನ ಮಹಾನುಭಾವತೆಯನ್ನು ತನ್ನ ಭಾರತಕಥೆಗೆ ಪ್ರಾಣವನ್ನಾಗಿ ಸ್ಥಾಪಿಸಿಕೊಂಡದ್ದು ರನ್ನನ ಮೊದಲನೆಯ ಹಿರಿಮೆಯಾದರೆ, ಆ ಪ್ರಾಣಕ್ಕೆ ಈ 'ಸಿಂಹಾವಲೋಕನಕ್ರಮ'ದ ದೇಹವನ್ನು ಸೃಷ್ಟಿಸಿಕೊಂಡದ್ದು ರನ್ನನ ಎರಡನೆಯ ಹಿರಿಮೆ.

ಏನಿದು, ಈ 'ಸಿಂಹಾವಲೋಕನಕ್ರಮ'ದ ಅನನ್ಯಸಾಮಾನ್ಯತೆ?

ಏನೆಂದರೆ: ಇಲ್ಲಿನ ಕಥೆ ಕೇವಲ ಹದಿನೆಂಟನೆಯ ದಿನದ ಅಪರಾಹ್ನ ಮಾತ್ರದ ಕಥೆಯಾದರೂ, ಕಥೆಯನ್ನು ನಡಸುವ ಪಾತ್ರಗಳು ಅಲ್ಲಲ್ಲೆ ಅಲ್ಲಲ್ಲೆ ನಿಂತು, ಹಾಗೇ ಹಿಂದುಹಿಂದಕ್ಕೆ ದೃಷ್ಟಿ ಎಸೆದು, ಆದಿಪರ್ವದ ಕಾಲದಿಂದ ಶಲ್ಯಪರ್ವ ಪೂರ್ತಿಯಾಗಿ ನಡೆದ ಕಥೆಯನ್ನೆಲ್ಲಾ ಜ್ಞಾಪಿಸಿಕೊಂಡೇ ಮುಂದೆ ಹೋಗುತ್ತವೆ. ಉದಾಹರಣೆಗೆ: ಆರಂಭದಲ್ಲಿ ದ್ರೌಪದಿಯ ಮನಸ್ತಾಪ, ಭೀಮನ ಪ್ರತಿಜ್ಞೆ ಎಂಬ ಪ್ರಸ್ತಾವದಲ್ಲಿ ಸಭಾಪರ್ವದ ದ್ರೌಪದೀ ಮಾನಭಂಗವೂ ಉದ್ಯೋಗಪರ್ವದ ಶ್ರೀ ಕೃಷ್ಣನ ರಾಯಭಾರವೂ ಸೂಚಿತವಾಗಿವೆ. ಮುಂದೆ ದುರ್ಯೋಧನನು, ಭೀಷ್ಮರೂ ದ್ರೋಣರೂ ಬೇಕೆಂದೇ ಪಾಂಡವರೆಮರು ಸೋತರೆಂದು ಆಕ್ಷೇಪಿಸುವಾಗ, ಸಂಜಯನು ಭೀಮಾರ್ಜುನರ ಅಸಾಮಾನ್ಯವಾದ ಪರಾಕ್ರಮವನ್ನು ವರ್ಣಿಸುತ್ತಾ—ಅರ್ಜುನನು ದುರ್ಯೋಧನನನ್ನು ಚಿತ್ರಾಂಗದನ ಸೆರೆಯಿಂದ ಬಿಡಿಸಿತಂದದ್ದು, ಭೀಮನು ಹಿಡಿಂಬ ಬಕ ಜಟಾಸುರ ಜರಾಸಂಧ ಕೀಚಕ ಮೊದಲಾದವರನ್ನು ಕೊಂದದ್ದು, ಇವುಗಳನ್ನು ಉದಾಹರಿಸುತ್ತಾನೆ. ಅದಕ್ಕೆ ಉತ್ತರವಾಗಿ ಕೃಷ್ಣಾರ್ಜುನರನ್ನು ಹೀಯಾಳಿಸುವ ಸಂದರ್ಭದಲ್ಲಿ, ದುರ್ಯೋಧನನು, ಕಿರಾತಾರ್ಜುನೀಯದ ಪ್ರಸಂಗವನ್ನೂ ಅರ್ಜುನನು ನಟನಾಗಿ ಮತ್ಸ್ಯನಗರಿಯಲ್ಲಿದ್ದುದನ್ನೂ ಕೃಷ್ಣನು ತನ್ನ ತಂಗಿಯನ್ನು ಅರ್ಜುನನಿಗೆ ಮದುವೆ ಮಾಡಿಕೊಟ್ಟುದನ್ನೂ ಎತ್ತಿ ಆಡುತ್ತಾನೆ. ಮತ್ತೆ ಹಾಗೇ ಮುಂದೆ

ಬಂದರೆ, ಮರುಳುಗಳ ಮಾತಿನಲ್ಲಿ, ದುರ್ಯೋಧನ ಹಿಂದೆ ಭೀಮನನ್ನು ಕೊಲ್ಲಲು ಮಾಡಿದ ಅರಗಿನ ಮನೆ, ವಿಷದ ಲಡ್ಡುಗೆ ಮುಂತಾದವುಗಳೆಲ್ಲಾ ಮಿಂಚುತ್ತವೆ. ಇನ್ನೂ ಮುಂದೆ ಬಂದರಂತೂ, ದುರ್ಯೋಧನನ ಪ್ರಲಾಪದ ಭಾಗಗಳಿಗೆ ಬಂದಾಗ—ದ್ರೋಣನ ಕಥೆಯೇ, ಅಭಿಮನ್ಯು ವಧೆಯಾದ ಕಥೆಯೇ, ದುಶ್ಶಾಸನನ ಕಥೆಯೇ, ಕರ್ಣನ ಸರ್ವಕಥೆಯೇ—ಎಲ್ಲವೂ ಮಡಿಕೆಮಡಿಕೆಯಾಗಿ ಮಾಲೆಮಾಲೆಯಾಗಿ ಮರುಕೊಳಿಸಿಕೊಂಡು ಬರುತ್ತವೆ. ಇನ್ನೂ ಇಂಥವೇ ಉದಾಹರಣೆ ಕೃತಿಯ ಉದ್ದಕ್ಕೂ ಇವೆ.

ಈ ಕೃತಿಯಲ್ಲಿ ರನ್ನ ಸಾಧಿಸಿರುವ ಪರಿಣಾಮವನ್ನು ಇವನಿಗೆ ಹಿಂದೆ ಯಾರೂ ಸಾಧಿಸಿಲ್ಲ. ಆದ್ದರಿಂದಲೇ 'ಆರಾತೀಯ ಕವೀಶ್ವರರಾರುಂ ಮುನ್ನಾರ್ತರಿಲ್ಲ' ಎಂಬ ಮಾತು ಸತ್ಯ. ಹಿಂದಿನವರು ಯಾರೂ ಹೀಗೆ ಮಾಡಿದವರಿಲ್ಲ ಎಂಬ ಮಾತು ಸ್ವಲ್ಪ ಹೆಚ್ಚಾಗಬಹುದೇನೋ! ನಿಜ, ಪಂಪ ಒಂದು ಸಮಸ್ತಭಾರತ ಬರೆದನಾದರೆ, ಇದು ಇನ್ನೊಂದು ಸಮಸ್ತಭಾರತ!

## ೩. ಅಜಿತ ತೀರ್ಥಂಕರ ಪುರಾಣತಿಲಕಂ

ರನ್ನನ 'ಸಾಹಸಭೀಮವಿಜಯ' ವನ್ನು ನಾವು ಏನೇ ಮೆಚ್ಚಿ, ಎಷ್ಟೇ ಕೊಂಡಾಡಿಕೊಂಡರೂ ಇನ್ನೊಂದು ದೃಷ್ಟಿಯಲ್ಲಿ ಅವನ ಅಜಿತ ಪುರಾಣಕ್ಕೇ ಅಗ್ರತಾಂಬೂಲ.

ಜಗದೊಳಗಾದಿಪುರಾಣಂ
ನೆಗಟ್ದುದು ಮುಂ ಪಂಪನಿಂದೆ ಪೊನ್ನಿಗನಿಂದಂ
ನೆಗಟ್ದುದು ಶಾಂತಿಪುರಾಣಂ
ನೆಗಟ್ದುದು ಕವಿರತ್ನನಿಂದಮಜಿತಪುರಾಣಂ ೧

ಉಪಮಾತೀತಮೆನಿಪ್ಪಾ
ದಿಪುರಾಣದ ರೇಖೆಗಂ ಬರಲ್ ನೆಱೆಗುಮೆ ಶಾಂ
ತಿಪುರಾಣದ ರೇಖೆಗಮಜಿ
ತಪುರಾಣದ ರೇಖೆಗಂ ಪುರಾಣದ ಕೃತಿಗಳ್ ೨

ಕವಿಜನದೊಳ್ ರತ್ನತ್ರಯ
ಪವಿತ್ರಮೆನೆ ನೆಗಟ್ದ ಪಂಪನುಂ ಪೊನ್ನಿಗನುಂ
ಕವಿರತ್ನನುಮೀಮೂವರ್
ಕವಿಗಳ್ ಜಿನಸಮಯದೀಪಕರ್ ಪೆಱರೊಳರೇ ೩

ಸುಭಗಕವಿ ಪಂಪನಿಂ ವಾ
ಗ್ವಿಭವೋನ್ನತಿ ನೆಗಟ್ದುದವನ ಗುಣಗಣನೆಯೊಳಿಸೆದಿ
ರ್ದುಭಯಕವಿಚಕ್ರವರ್ತಿಗ
ಮಭಿನವ ಕವಿಚಕ್ರವರ್ತಿಗಂ ದೊರೆಯೊಳರೇ ೪

ಕವಿಗಳವರಿರ್ವರೇ ಪು
ಣ್ಯವಂತರಿರ್ವರೆ ಕೃತಾರ್ಥರಿರ್ವರೆ ಸುಭಗರ್
ಕವಿತಾಗುಣಾರ್ಣವಂ ಮೇಣ್
ಕವಿರತ್ನಂ ಮೇಣ್ ಗುಣಕ್ಕೆ ಮಚ್ಚರಮುಂಟೇ ೫

ತ್ರಿಜಗದೊಳಾದಿಪುರಾಣಮು
ನಜಿತಪುರಾಣಮುಮನೆಸೆಯೆ ಪೇೞ್ದುದಱಿಂದಂ
ದ್ವಿಜವಂಶಧ್ವಜ ವೈಶ್ಯ
ಧ್ವಜರೆನ್ನದರೊಳರೆ ಪಂಪನಂ ರತ್ನನುಮಂ ೬

ಧರಣಿಗೆ ನೆಗೞ್ದರ್ ಸಲೆ ರ
ಟ್ಟರಾಜ್ಯದೊಳ್ ಮುನ್ನೆ ಪಂಪನುಂ ಪೊನ್ನಿಗನುಂ
ನರಪತಿಪೂಜ್ಯಂ ಚಾಳು
ಕ್ಯರಾಜ್ಯದೊಳ್ ನೆಗೞ್ದನುಭಯಕವಿ ಕವಿರತ್ನಂ ೭

ಈ ಪುರಾಣತಿಲಕವನ್ನು, ದಾನಚಿಂತಾಮಣಿ ಎಂದು ಪ್ರಸಿದ್ಧಳಾದ ಅತ್ತಿಮಬ್ಬೆ ಎಂಬ ಜಿನಭಕ್ತೆಯ ತೃಪ್ತಿಗೋಸ್ಕರ ರನ್ನನು ಬರೆದನು.

ಜಿನತಿಲಕಚರಿತಮೆಸೆದಿರೆ
ಜಿನೇಂದ್ರನುತಿಮತಿ ಮಹಾಸತೀತಿಲಕಂ ಪೆಂ
ಪಿನ ಕಣಿ ಪೇೞಿಸೆ ಪೇೞ್ದಂ
ಮನವೊಸೆದು ಪುರಾಣತಿಲಕಮಂ ಕವಿತಿಲಕಂ ೮

ಪೊನ್ನಿಗನುಂ ಮಲ್ಲಪನುಂ
ಪೊನ್ನ[ನಿನ]ೞ್ತಿಯೆ ಪುರಾಣಚೂಡಾಮಣಿಯಂ
ಮುನ್ನಂ ಪೇೞಿಸಿದಂತೆ ಗು
ಣೋನ್ನತೆ ಕವಿರತ್ನನಿಂದಿದಂ ಪೇೞಿಸಿದಳ್ ೯

ಭ್ರಾಂತೇನಾದಿಪುರಾಣದ
ಶಾಂತಿಪುರಾಣದ ಸಮಾನಮೆನೆ ಕೃತಿಯಂ ಕ
ಲ್ಪಾಂತಸ್ಥಾಯಿಯನಾಶ್ರಿತ
ಚಿಂತಾಮಣಿಗತ್ತಿಮಬ್ಬೆಗೞ್ತಿಯೆ ಪೇೞ್ವೆಂ ೧೦

ಪೆಸರ್ಗೊಂಡಲ್ತಿಯೊಳತ್ತಿಮಬ್ಬೆಯ ಗುಣವ್ರಾತಂಗಳಂ ಕೇಳ್ದ ಭ
ವ್ಯಸಮೂಹಂ ಪೊಗಟ್ಬಂತು ಕೀರ್ತಿ ನೆಗಟ್ವಿಂತೀಲೋಕದೊಳ್ ಬಲ್ಮೆ ರಂ
ಜಿಸೆ ಬಲ್ಲರ್ಗೆಡೆಗೊಂಡು ಬಣ್ಣಿಸೆ ಮಹಾಕಾವ್ಯಂಗಳೊಳ್ ಮಚ್ಚಿ ಬ
ಣ್ಣಿಸುವೆಂ ಪುಣ್ಯಪುರಾಣಮಂ ಜಿತಮನೋಜಾತಾಜಿತಸ್ವಾಮಿಯಾ ೧೧

ಎಂದು ರತ್ನನು ಅಜಿತ ಪುರಾಣವನ್ನು ಬರೆದನು.

ಜಿತಕಂದರ್ಪಮೆನಿಪ್ಪ ಶಾಂತರಸಮೆತ್ತುದ್ದಾಮ ಶೃಂಗಾರಮೆ
ತ್ತತಿಗಂಭೀರಜಿನೋಕ್ತಿಯೆತ್ತ ಸಕಲಂ ಲೋಕೋಕ್ತಿಯೆತ್ತಾಗಮಾ
ಮೃತಮೆತ್ತನ್ಯಮತಪ್ರಚಂಡವಿಷಮೆತ್ತೆಂಬಂತು ಕಿಂ ಕೇನ ಸಂ
ಗತಮೆಂಬಂತಿರೆ ಪೇಟ್ದ ಧರ್ಮಕಥೆಯುಂ ಪಾಪಕ್ಕೆ ಪಕ್ಕಪ್ಪುದೇ ೧೨

ಸುರಲೋಕಾವತರೋತ್ಸವಂ ಪರಿಕೃತಂ ಜನ್ಮಾಭಿಷೇಕೋತ್ಸವಂ
ಪರಿನಿಷ್ಕ್ರಾಂತಿಮಹೋತ್ಸವಂ ಪ್ರವಿಮಲಂ ಕೈವಲ್ಯ ಬೋಧೋತ್ಸವಂ
ಪರಿನಿರ್ವಾಣಮಹೋತ್ಸವಂ ಜಿನಮಹಾಕಲ್ಯಾಣಮಯ್ದುಂ ಸವಿ
ಸ್ತರದಿಂದಿರ್ಪುವು ವರ್ಣಕಂಗಳಿವಜಿಂ ಭವ್ಯಾಂಗಮೇನೊಪ್ಪದೇ ೧೩

ಹೀಗೆ ತೀರ್ಥಂಕರ ಪುರಾಣವೊಂದನ್ನು ರಚಿಸಿ ಹಿಂದಿನ ಪಂಪ ಪೊನ್ನರ ಸಾಲಿಗೆ ಇವನು ಏರಿಬರಲು ಕಾರಣವಾದ ಈ ಅಜಿತಪುರಾಣದ ಅಂತಹ ಅರ್ಹತೆಯಾದರೂ ಯಾವುದು?

ಎನಿತೊಳವು ಮನದ ಸಂದೆಯ
ಮನಿತುಮಸಂದಿಗ್ಧಮೆನಿಸುಗುಂ ಧರ್ಮದೊಳ
ಪ್ಪನುರಾಗಮೊದವುಗುಂ ರ
ತ್ನನ ಪೇಟ್ದಜಿತನ ಪುರಾಣಮಂ ಕೇಳಲೊಡಂ ೧೪

ಎನಿತುಂಟಾಗಮವರ್ಣನ
ಮನಿತುಮನೊಳಕೊಂಡು ಸಕಲಭವ್ಯಜನಂಗ
ಳ್ಗನುರಾಗಮನೊಡರಿಸಿದಪು
ದೆನಿಪ ಪುರಾಣಂ ಪುರಾಣತಿಲಕಮಿದಲ್ತೇ ೧೫

ನೆಗೞ್ದ ಕವಿರತ್ನನಂತೊಳ
ಪುಗುವುದು ಪೊಗ್ಗಾಯ್ತೆ ಜಿನಮತಾಂಭೋಧಿಯುಮಂ
ಪುಗದಾಗಮಮಱಿವರ ಬಗೆ
ವುಗದೆ ಕೆಲರ್ ಕವಿಗಳಾಡಿದರ್ ತಡಿದಡಿಯೊಳ್ ೧೬

ಪೆಱವುಳಿಯುಳ್ಳವಿಲ್ಲಿಯೊಳವಾಗಮಭಾಷೆಗಳಿಲ್ಲಿಯುಳ್ಳವಂ
ಪೆಱವುಳಿ ಕಾಣಲಾಗದೆನೆ ಪಂಪನ ಪೊನ್ನನ ಪೇೞ್ದ ಕಬ್ಬದೊಳ್
ನೆಱೆಯೆ ಪರಿಸ್ಫುಟಂ ನೆಱೆಯದಿರ್ದುದುಮಂ ನುಡಿದೆಯ್ದೆ ಬಲ್ಮೆ ಕ
ಣ್ದೆಱೆಯೆ ನೆಗೞ್ಚಿದಂ ಕವಿಚತುರ್ಮುಖನಾಗಮವೇದಿಯಪ್ಪುದಂ ೧೭

ಈ ಕಾವ್ಯದಲ್ಲಿ ಅಮರೇಂದ್ರನು ಅಜಿತತೀರ್ಥೇಶ್ವರನನ್ನು ಹೀಗೆ ಸ್ತೋತ್ರ ಮಾಡುತ್ತಾನೆ:

ಶ್ರೀ ಸಕಲಸುರಾಸುರಪತಿ
ಭಾಸುರಮಣಿಮುಕುಟಘಟ್ಟಿತಾಂಘ್ರಿದ್ವಯಸಿಂ
ಹಾಸನಶಿಖರಸ್ಥಿತಚರ
ಣಾ ಸಕಲಜನಕ್ಕೆ ನೀನೆ ಕಲ್ಪಾಂಘ್ರಿಪನೈ ೧೮

ದಿವದಿಂದಂ ನೀಂ ಗರ್ಭ
ಕ್ಕವತರಿಸದ ಮುನ್ನೆ ಮೂಱುಕೋಟಿಯುಮರೆಯುಂ
ದಿವಸಕ್ಕಂ ಕಱೆವೊಂ ವೈ
ಶ್ರವಣಂ ಜಿನ ನಿಮ್ಮೊಲಧಿಕಪುಣ್ಯರುಮೊಳರೇ ೧೯

ಅನಿಮಿಷಸುಂದರಿಯರ್ ನಿಜ
ಜನನಿಗೆ ಜಿನ ಮಾಡಿ ಗರ್ಭಸಂಶೋಧನಮಂ
ವಿನಯಂಬೆರಸೋಲಗಿಸುವ
ರೆಸಿಸಿದ ಪುಣ್ಯಮನಗಣ್ಯಮಂ ಬಣ್ಣಿಪರಾರ್ ೨೦

ದಿವಿಜರ್ ಮಜ್ಜನವಳ್ಳರ್
ದಿವಿಜನಗಂ ಪೀಠಮಾಗೆ ದಧಿಘೃತದುಗ್ಧಾ

ರ್ಣವಷಂಡಕಾಂಡಮಾದು
ತ್ಸವಮನದೇಪೊಗೞ್ವುದಘಬಲಾಹಕಪವನಾ ೨೧

ಬಱಿದಾದುದು ಜಲಧಿಜಲಂ
ಕಿಱಿದಿರ್ದುದು ಮೇರು ನಿನ್ನ ಭರದಿಂ ಸುಯ್ಯೊಳ್
ತಱಗೆಲೆಗಳಂತೆ ಪಾಱಿದ
ರಱಿಕೆಯ ಸುರರೇಂ ಕುಮಾರಚರಿತಂ ನಿನ್ನಾ ೨೨

ಈ ವಯಸದೊಳೀರೂಪಿನೊ
ಳೀವಿಭವದೊಳಜಿತ ನೀನೆ ತೊಱೆದೈ ರಾಜ್ಯ
ಶ್ರೀವಲ್ಲಭೆಯುಂ ತೊಱೆಯಲ್
ದೇವ ಪೆಱರ್ ತರಳಚಿತ್ತರೇಂ ನೆಱೆದಪರೇ ೨೩

ಕುಲತಿಲಕ ಸಕಲಜಗತೀ
ತಲತಿಲಕ ಕುಬೇರರಚಿತಮುಚಿತಶ್ರೀಯುಂ
ಕಳಕಳಿಪುದು ಸಕಲಶ್ರೀ
ವಿಳಾಸಮುಂ ನಿನ್ನ ಸಮವಸರಣವಿಳಾಸಂ ೨೪

ವನಬರ್ಹಿಗಳಂ ಮೇಘ
ಧ್ವನಿ ತಣಿಪುವ ತೆಱದೆ ದೇವ ನಿನ್ನಯ ದಿವ್ಯ
ಧ್ವನಿ ತಣಿಪಿದಪುದು ವಿಷ್ಟಪ
ಜನಮುಂ ಸಕಲತ್ರಿವಿಷ್ಟಪೈಕಾಧಿಪತೀ ೨೫

ನಾಕಾವತರಣ ಭವದಭಿ
ಷೇಕಂ ನಿಷ್ಕ್ರಮಣಕೇವಲೋದಯಮಾಯ್ತಿಂ
ತೀ ಕಲ್ಯಾಣಚತುಷ್ಕಂ
ಪ್ರಾಕಟಕಲ್ಯಾಣಮಿರ್ದುದಿಂ ನಿರ್ವಾಣಂ ೨೬

ಅನಲಂಕಾರಮುಮುಜ್ಜನ
ಮನಂಬರಶ್ರೀವಿಳಾಸಮಕುಸುಮಮವಿಲೇ

ಪನಮೆನಿಪ ನಿನ್ನ ರೂಪೊ
ಳ್ಪಿನ[ದೈ] ಪೆಜಿರುಟ್ಟು ತೊಟ್ಟ ರೂಪೊಪ್ಪುಗುಮೇ ೨೭

ದೊರೆಗಾಣೆಂ ನಿನಗೆ ಜಿನೇ
ಶ್ವರ ಪೆಜರಂ ನಿನಗೆ ನೀನೆ ದೊರೆಯೆನಿಪ್ಪೈ ಮಂ
ದರಗಿರಿಗೆ ಮಂದರಾದ್ರಿಯೆ
ದೊರೆ ಜಲಧಿಗಗಾಧಜಲಧಿ ದೊರೆ ಪೆಜವೊಳವೇ ೨೮

ಗುಣನಿಳಯ ಮೇರುಚೂಡಾ
ಮಣಿ ಶರಣಾಗತಜಗತ್ರಯೀಜನರಕ್ಷಾ
ಮಣಿ ವಿನಯದಾನಚಿಂತಾ
ಮಣಿಚೂಡಾಮಣಿಮರೀಚಿರಂಜಿತಚರಣಾ ೨೯

ಕವಿರತ್ನನ ವರವಸ್ತು
ಸ್ತವ ರೂಪಸ್ತವ ಗುಣಸ್ತವಾಭರಣಂ ಭೂ
ಭುವನದ ಭವ್ಯಜನಂಗ
ಳ್ಗಿವತ್ತೆ ಕಂಠಸ್ಥವಾಗೆ ಕಂಠಾಭರಣಂ ೩೦

ಜನಕಂ ಶ್ರೀ ಜಿತಶತ್ರು ತಾಯ್ ವಿಜಯಸೇನಾದೇವಿ ಸಂದಿರ್ದಯೋ
ಧ್ಯೆ ನಿಜಾಮ್ನಾಯದ ರಾಜಧಾನಿ ಮಹಿಜಂ ಸಪ್ತಚ್ಛದಂ ದಂತಿಲಾಂ
ಛನಮಾ ರೋಹಿಣಿ ತಾರೆ ಯಕ್ಷಿ ತನಗಾ ಯಕ್ಷಂ ಮಹಾಯಕ್ಷನೆಂ
ಬಿನೆಗಂ ಸಂದಜಿತಂ ಜಿತಾರಿ ಪಡೆದಂ ಸಮ್ಮೇದದೊಳ್ ಮುಕ್ತಿಯಂ ೩೧

ಈ ಕವಿ ತನ್ನ ಗದಾಯುದ್ಧವನ್ನು ಬರೆದ ಕಾಲ ಏನೆಂಬುದನ್ನು ತಾನು ಎಲ್ಲೂ ಹೇಳಿಕೊಂಡದ್ದು ದೊರಕಿಲ್ಲ. ತಿಥಿ ತೇದಿಗಳನ್ನು ತರ್ಕಿಸಬಲ್ಲ ವಿದ್ವಾಂಸರು, ಗದಾಯುದ್ಧದ ರಚನಾಕಾಲವು ಕ್ರಿ. ಶ. ೧೦೦೭-೧೦೦೮ ಇರಬಹುದೆಂದು ಹೇಳುತ್ತಾರೆ. ಆದರೆ ಅಜಿತಪುರಾಣದ ಮಟ್ಟಿಗೆ, ಅದು ಪ್ರಕಟವಾದ ವತ್ಸರವನ್ನು ಕವಿಯೇ ತಿಳಿಸಿದ್ದಾನೆ.

ಶಕವರ್ಷಂ ಪಂಚದಶಾ
ಧಿಕನವಶತಮಾಗೆ ವಿಜಯಸಂವತ್ಸರ ಕಾ
ರ್ತಿಕ ನಂದೀಶ್ವರದಿನದೊಳ್
ಪ್ರಕಟಿಸಿದುದು ರತ್ನನಿಂದಮಜಿತಪುರಾಣಂ ೩೨

ಶಾಲೀವಾಹನ ಶಕ ೯೧೫ನೆಯ ವಿಜಯ ಸಂವತ್ಸರದಲ್ಲಿ, ಎಂದರೆ ಕ್ರಿ. ಶ. ೯೯೩ರ ಅಕ್ಟೋಬರ್ ೨೬ನೆಯ ದಿನ ಅಜಿತತೀರ್ಥಕರ ಪುರಾಣ ತಿಲಕವು ಪ್ರಕಟವಾಯಿತು.

## ೪. ರನ್ನನ ಸಗರೇಶ್ವರ ಚರಿತೆ

ಎರಡನೆಯ ತೀರ್ಥನಾಥನ
ಚರಿತದೊಳೆರಡನೆಯ ಚಕ್ರನಾಥನ ಚರಿತಂ
ಬರೆ ಬಣ್ಣಿಸಲಜಿತಜಿನೇ
ಶ್ವರಭಕ್ತಂ ಸಗರಚಕ್ರವರ್ತಿಯೆ ತಕ್ಕಂ ೧

ಅದೆಂತೆಂದೊಡೀ ಸಗರನೆಂಬನೆರಡನೆಯ ಚಕ್ರವರ್ತಿ ತನ್ನ ಮುನ್ನಿನ ಮೂಱನೆಯ ಜನ್ಮದೊಳ್ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ತೆಂಕಣತಡಿಯ ವತ್ಸಕಾವತೀವಿಷಯದ ಪೃಥ್ವೀನಗರಮನಾಳ್ವಂ ಜಯಸೇನ ನೆಂಬರಸನಾದನಾದಂ. ಆತನ ಮಹಾದೇವಿಯುಂ ವಿಜಯಸೇನೆಯೆಂಬವಳ್. ಆವರ್ಗೆ ರತಿಷೇಣನುಂ ಧೃತಿಷೇಣನುಮೆಂಬರಿರ್ವರ್ ತನಯರಾದರ್. ಅವ ರೊಳಗೆ ರತಿಷೇಣನುಂ ಸ್ವರ್ಣಪಾಷಾಣದಂತೆ ಕೃತಾಂತದಂತಾಂತರವಜ್ರಘಾತ ಜರ್ಝರೀಕೃತನಾಗೆ ಜಯಸೇನ ಮಹಾರಾಜಂ ನಿಜಪ್ರಿಯತನೂಜಶೋಕಾನ ಲಾತ್ಯಂತಸಂತಪ್ತಚಿತ್ತನೆನಿತಾನುಮಂದದಿಂ ಬಾಯಬಿಡು ವಿಪ್ರಲಾಪಂಗೆಯ್ವ ಕರುಣಾರುತಮಂ ಮಹಾರುತನೆಂಬರಸನ ಮೈದುನಂ ಮಾಣಿಸಿ

ತನಯವ್ಯಾಮೋಹದಿಂದಂ ಮಱುಗಿದೊಡೆಮಗಿಂ ಬರ್ಕುಮೇ ಸದ್ವಿವೇಕಂ
ಮನದಿಂ ಗೆಂಟಾಯ್ತು ಕಾಲಾನಲಕಬಳಿತರಾರಾರ್ಗದಾರಾರ್ಗೆ ಶೋಕಾಂ
ಧನೆಯಪ್ಪೈ ಖೇದಮುಂ ನಂಬದೆ ಜಿನಮತಮುಂ ನಂಬು ನೀನೆಯ್ದೆ ಧರ್ಮಂ
ನಿನಗಾರ್ಮಂ ನೀನುಮಾನುಂ ತಳರ್ವಮೊಡನೆ ಸಂಸಾರ ಕಾಂತಾರದಿಂದಂ ೨

ಎಂದು ತನ್ನ ಭಾವಂಗೆ ಸಂಸಾರಸ್ವರೂಪಮನಾಮಹಾನುಭಾವನಱಿಪು ವುದುಮಾತನ ಮಾತಂ ಕೇಳ್ದಪಗತಶೋಕನುಮುಪಗತವಿವೇಕನುಮಾಗಿ ಧೃತಿ ಯಂ ತಾಳ್ದಿ ಧೃತಿಷೇಣಂಗೆ ರಾಜ್ಯಾಭಿಷೇಕಪುರಸ್ಸರಂ ಸಾಮ್ರಾಜ್ಯಪದವಿಯಂ ಕೊಟ್ಟು ಬಾಹ್ಯಾಭ್ಯಂತರ ಪರಿಗ್ರಹಪರಿತ್ಯಾಗಂ ಗೆಯ್ದು ಪರಮತಪಸ್ಸಂಯಮ ಧರರಪ್ಪ ಯಶೋಧರಗುರುಗಳ ಪಕ್ಕದೆ ತಮ್ಮ ಮೈದುನ ಮಹಾರುತನುಂ

ತಾನುಂ ಮತ್ತಂ ಪಲಂಬರರಸುಮಕ್ಕಳ್ವೆರಸು ಪರಮಜಿನದೀಕ್ಷೆಯಂ ತ್ರಿಸಾಕ್ಷಿಕನಾಗಿ ಕೆಯ್ಕೊಂಡು ಕಾಲಾವಸಾನದೊಳ್ ಸಂನ್ಯಸನಮರಣದಿನಾರಣಮೆಂಬ ಪದಿನೆಯ್ದನೆಯ ಕಲ್ಪದೊಳ್ ಮಹಾಬಲನೆಂಬ ದೇವನಾಗಿ ಪುಟ್ಟಿ ವೈಮಾನಿಕ ಸುಂದರೀವದನಾರವಿಂದವಿಲೋಕವಿಲಾಸಮಣಿದರ್ಪಣಾಯಮಾನವಿಮಲಕಪೋಲಪುಳಕನಾದಂ ಮಹಾರುತನುಮಾಕಲ್ಪದೊಳೆ ಮಣಿಕೇತುವೆಂಬೊಂ ದೇವನಾದನಾಗಿ ಸುರಲೋಕಸರೋವರಪರಿಸರೋತ್ತಂಸರಾಜ [ಹಂಸ] ನಾದಂ

ಅಂತವರಿರ್ವರುಂ ಗೀರ್ವಾಣಸುಖಮನನುಭವಿಸುತ್ತುಮಿರ್ದೊರ್ಮೆ ನಮ್ಮಿರ್ವರೊಳಗಾರ್ ಮುನ್ನಂ ಮನುಷ್ಯಲೋಕಕ್ಕೆ ಪೋದರವರಂ ದೇವಲೋಕದೊಳಿರ್ದವರ್ ಪೋಗಿ ತಮ್ಮ ಬಲ್ಲಂದದಿಂ ಪ್ರತಿಬೋಧಿಸಿ ವಿಷಯಸುಖಾ[ವ]ಮುಖರಂ ದೀಕ್ಷಾಭಿಮುಖರಂ ಮಾಳ್ಪುದೆಂದು ಮಹಾಬಲಮಣಿಕೇತುಗಳ್ ಕೃತಕಸಂಕೇತಂಮಾಡೆ

ಜಯಸೇನಚರ ಮಹಾಬಳಂ ದಿವಿಜಂ ದಿವಿಜಲೋಕಸುಖಮನನುಭವಿಸಿ ಬಂದು ಜಂಬೂದ್ವೀಪದ ಭರತಕ್ಷೇತ್ರದ ಕೌಶಲದೇಶದಯೋಧ್ಯಾಪುರಮನಾಳ್ವ ಇಕ್ಷ್ವಾಕುವಂಶದ ಗುಣಮಣಿಸಮುದ್ರನೆನಿಸಿದ ಸುಭದ್ರವಿಜಯಂಗಂ ಶೃಂಗಾರಸಮುದ್ರವೇಲಾಲೀಲೆಯೆನಿಸಿದ ಸುವೇಲಾದೇವಿಗಮತಿಕರಾಳಾಲೋಕನಕಬಳಿತಾರಾತಿನಗರಂ ಸಗರನೆಂಬೊಂ ತನಯನಾಗಿ ಕುಮಾರಕಾಲಂ ಪೋಗೆ ಮಹಾಮಂಡಲೇಶ್ವರಪದವಿಯನಲಂಕರಿಸಿ ಮಹೀಮಂಡಲಮಂ ಪ್ರತಿಪಾಲಿಸಿ ಮತ್ತಂ ಚಕ್ರರತ್ನಂ ಪುಟ್ಟೆ ಸಕಲಚಕ್ರವರ್ತಿಯಾಗಿ ಸಾಮ್ರಾಜ್ಯಲಕ್ಷ್ಮಿಯಂ ತಾಳ್ದಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರ್ಪನ್ನೆಗಂ—

ಬಂದ ಶರತ್ಸಮಯದೊಳ್ ಸಗರಚಕ್ರವರ್ತಿ ಸಕಲದಿಗ್ವಿಜಯ ಯಾತ್ರೋದ್ಯುಕ್ತಚಿತ್ತನಾಗಿ ಪಣ್ಣಿ ಬಂದಿರ್ದ ನಿಜವಿಜಯಸಿಂಧುರದ ಬೆಂಗೆವಂದು ಚತುರಂಗಬಲಂಬೆರಸು ತಳರ್ದು ಅಱುವತ್ತುಸಾಸಿರವರ್ಷಂ ದಿಗ್ವಿಜಯಂಗೆಯ್ದು ಸಿದ್ಧದಿಗ್ವಿಜಯನಾಗಿ ಸಮ್ಮೇದ ಮೇದಿನೀಧರಕ್ಕೆ ವಂದು ದ್ವಿತೀಯ ತೀರ್ಥೇಶ್ವರನಂ ದ್ವಿತೀಯ ಚಕ್ರೇಶ್ವರನ್ ಅದ್ವಿತೀಯಭಕ್ತಿಯಿಂ ಸ್ತುತಿಸಿ ನಿರ್ವಾಣಭಕ್ತಿಯಿಂ ತ್ರಿಃಪ್ರದಕ್ಷಿಣಂಗೆಯ್ದು ಸಿದ್ಧಶೇಷೆಯಂ ಕೊಂಡು ಮಗುಳ್ದು ಬಂದು ನಿಜವಿಜಯರಾಜಧಾನಿಯನಯೋಧ್ಯಾಪುರಮಂ ಪೊಕ್ಕು ಸಕಲಚಕ್ರವರ್ತಿ ಸಾಮ್ರಾಜ್ಯಪರಿಕರಪರಿವೃತನಾಗಿ ದಶಾಂಗದೊಳ್ ಕೂಡಿ ಸುಖಮಿರ್ದು—

ಒಂದು ದಿವಸಂ ತನ್ನ ಪೊಱಲ ಸಿದ್ಧವನದೊಳ್ ಶ್ರೀ ಭಟ್ಟಾರಕರ್ ಚತುರ್ಮುಖಪ್ರತಿಮಾ ಯೋಗಧಾರಿಗಳ್ ಉತ್ಪನ್ನ ಕೇವಳಜ್ಞಾನಿಗಳಾಗಿರ್ದ ರೆಂಬುದಂ ವನಪಾಲಕನಿಂ ಕೇಳ್ದು ಸಕಲ ಮಹೀಪಾಲಸಮುದಿತಧರ್ಮಾನು ರಾಗದಿಂದಾನಂದಭೇರಿಯಂ ಪೊಯ್ಸಿ ಮಹಾಸಾಮಂತ ಮಂಡಳಿಕ ಮಕುಟ ಬದ್ಧಾದಿಗಳ್ ಷಣ್ಣವತಿ ಸಹಸ್ರಾಂತಃಪುರಮುಮಱುವತ್ತು ಸಾಸಿರ್ವರ್ ಮಕ್ಕ ಳುಂ ಶ್ರೇಷ್ಠಿ ಸೇನಾಪತಿ ತಳವಱ ದಂಡನಾಯಕ ಪ್ರಭೃತಿಗಳುಂ ಹಸ್ತ್ಯಶ್ವ ರಥಪದಾತಿಗಳುಂಬೆರಸು ವಿಭೂತಿಯಿಂ ಬಂದು ವಾಹನಂಗಳಿಂದಿೞಿದು ಮುನ್ನೆ ಬಂದಿರ್ದ ಚತುರ್ನಿಕಾಯಾಮರಜನದೊಡನೆ ವಿವಿಧಾರ್ಚನೆಗಳಿಂದರ್ಚಿಸಿ ವಿವಿಧಸ್ತುತಿಶತಂಗಳಿಂ ಸ್ತುತಿಯಿಸಿ ಕುಳ್ಳಿರ್ದು ಧರ್ಮಾವತಂಸಾಲಂಕೃತಕರ್ಣ ನಾಗಿರ್ಪಿನಂ—

ಅಲ್ಲಿಗಮರನಿಕಾಯದೊಡನೆ ಬಂದಾರಣಕಲ್ಪದ ಮಣಿಕೇತುದೇವಂ ಬೆಸಸಿಮೆನ್ನ ಕೆಳೆಯಂ ಜಯಸೇನಚರನಪ್ಪ ಮಹಾಬಲನೆಲ್ಲಿಪುಟ್ಟಿದನೆಂಬುದು ಮೀಯಿರ್ದನೆ ಸಗರಚಕ್ರವರ್ತಿಯೆಂದು ಭಟ್ಟಾರಕರ್ ಬೆಸಸೆ ಸಗರನೊಳ್ ಸಂಭಾಷಣಂಗೆಯ್ದು ದಿವ್ಯಾಂಬರಭೂಷಣಂಗಳಿಂ ಪೂಜಿಸಿ

ಭೂತಳವಲ್ಲಭ ರಿಪುಲಯ
ಕೇತು ಜನಾನಂದಹೇತು ಧರ್ಮೋೀವನ್ನ
ತ್ಸೇತು ಭವತ್ಸಖನೆಂ ಮಣಿ
ಕೇತುವೆನೇನಱಿವೊ ನೀಂ ಮಹಾಬಲಚರನೈ ೩

ತ್ರಿದಶನಿವಾಸದೊಳ್ ನೆನೆವು [ದಿರ್ವರು] ಮಾದರದಿಂ ವ್ಯವಸ್ಥೆಮಾ
ಡಿದುದನಪಾರಸಂಸರಣಪಾರಮನೆಯ್ದುವುದೆಂದೊಡಂತರಂ
ಗದೊಳದನಾನ್ಯ [ಪ]ಂ ನೆನೆದುಮಾಱನೆ ಷಷ್ಟಿಸಹಸ್ರ ಪುತ್ರಮೋ
ಹದೆ ನಿಜರಾಜ್ಯಮುಂ ತೊಱೆಯಲಾರ್ಗೆಲಲಾರ್ಪರೊ ಮೋಹರಾಜನಂ ೪

ಅಂತಾತನನೆಂತುಮೊಡಂಬಡಿಸಲಾಱದೆ ದಿವಿಜಂ ನಿಜನಿವಾಸಕ್ಕೆಪೋಗಿ ಅನೇಕ ಸಂವತ್ಸರಂಗಳಱಪಿ ಪೋಗುತ್ತಿರೆ

ಮತ್ತಮೊಂದು ದಿವಸಮಾರಣಕಲ್ಪದಿಂ ಚಾರಣಋಷಿರೂಪದೆ ಮಣಿ ಕೇತು ಬಂದು ಪೊಱಲ ಜಿನಾಲಯದ ಮಂಡಪದೊಳಿರ್ಪುದುಂ

ಸಗರಚಕ್ರವರ್ತಿ ವಂದನಾಭಕ್ತಿಯಿಂ ಬಂದು ವಂದಿಸಿ ಚಾರಣರಂ ನಿಮ್ಮ ತಪಂಬಟ್ಟ ಕಾರಣಮೇನೆಂದು ಬೆಸಗೊಳೆ ಜಾತಿಜರಾಮರಣಾನಿಷ್ಟಸಂಯೋಗ ಮಿಷ್ಟವಿಯೋಗಸಹಜಸಮುದ್ಭವಶಾರೀರಮಾನಸಾಗಂತುಕದುಃಖದಿಂ ಪತ್ತು ವಿಟ್ಟನಂತಚತುಷ್ಟಯಮಂ ಪೊರ್ದಲೆಂದು ತಪಂಬಟ್ಟೆನೆಂದಱಿಪಿ ಕಿಱಿದುಂ ಬೇಗದಿಂ ತನ್ನ ದಿವ್ಯಸ್ವರೂಪಮಂ ತೋಱಿ ಮತ್ತಂ ತಮ್ಮ ಕೃತಪ್ರತಿಜ್ಞೆಯಂ ತೋಱಿ ನುಡಿದು

ಆಳವಿಯಿಸಿಂತನಂತಸುಖನಂತಜರಾಮರನಂತೆ ಮುಕ್ತಿಹೇ<br>
ತುವನಘಕೇತುವಂ ಪರಮದೀಕ್ಷೆಯನೊಲ್ಲದೆ ರಾಜ್ಯಮೋಹದಿಂ<br>
ಭವಜಲರಾಶಿಯೊಳ್ ಮುಳುಗಲಿರ್ಪೆಯೆ ಚರ್ವಿತಚರ್ವಣಕ್ಕೆ ನೀ<br>
ನವಚಱಿಬೇಡ ಸಾಲದೆ ಭವಾನುಭವಂ ಸಗರಾವನೀಶ್ವರಾ ೫

ಕಡುಚಪಲನಿವಂ ತನಗೇ<br>
ಗಿಡುಗುಮೊ ಪರದುಃಖಶೀತಲಂ ಮಚ್ಚಿದವೋಲ್<br>
ನುಡಿದಪನೆನ್ನದಿರೆನ್ನೀ<br>
ನುಡಿ ನಿನ್ನ ಹಿತಾರ್ಥಮೆಂದೆ ಬಗೆ ಗಡ ನೃಪತೀ ೬

ಎಂದೊಡಂ ರಾಜ್ಯಮೋಹದೊಳಂ ಪುತ್ರಸ್ನೇಹದೊಳಂ ತನ್ನ ನುಡಿ ಗೊಡಂಬಡದನಿತಱೊಳೆ ಮಣಿಕೇತುವಾತನ ವೈರಾಗ್ಯಹೇತುವನವಧಾರಿಸಿ

ಆ ಜಯಸೇನನಾದ ಭವದೊಳ್ ರತಿಷೇಣವಿಯೋಗದೊಳ್ ಮಹಾ<br>
ರಾಜವಿಭೂತಿಯಂ ತೊಱೆದನಿಲ್ಲಿಯುಮಂತೆ ಸುತವ್ಯಪಾಯಮಂ<br>
ಯೋಜಿಸೆ ರಾಜ್ಯಮಂ ತೊಱೆಗುಮೆಂದಱಿದಾ ಮಣಿಕೇತು ಚಿತ್ತಪಂ<br>
ಕೇಜದೊಳೊಂದುಪಾಯಮುಕರಂದಮನಿಟ್ಟೊಸೆದಿರ್ದನಿರ್ಪಿನಂ ೭

ಅಂತನೇಕ ಸಂವತ್ಸರಂ ಕಟಿಪುತಿರಲೊಂದು ದಿವಸಮಱುವತ್ತು ಸಾಸಿರ್ವರ್ ಕುಮಾರರುಂ ತಮ್ಮಯ್ಯನನೋಲಗಿಸಲ್ ಬಂದು ಕಿಱಿದು ಬೇಗಮೋಲಗಿಸುತಿರ್ದು ಬೀಡಿಂಗೆ ಪೋಗಿಮೆನೆ

ಬೆಸನಂ ಬೆಸಸೆನೆ ಸಗರಂ
ಬೆಸನೇಂ ಮಕ್ಕಳಿರ ನಿಮಗೆವೆಂದಿಂತೀಗಳ್
ಬೆಸಕೆಯ್ಯದರುಮನೆನಗಂ
ಬೆಸಕೆಯ್ಯಲ್ ಚಕ್ರರತ್ನಮಿರ್ದಪುದಲ್ತೇ ೮

ನೀಮಿನಿಬರುಮೆನ್ನೊಡನೆ ಸಾಮ್ರಾಜ್ಯಸುಖಮನನುಭವಿಸುತಿರ್ಪು ದಿದುವೆ ಬೆಸನೆಂಬುದುಮಾಗ್ರಹಬುದ್ಧಿಗಳಾಗಿ

ಶರಣೆಂದಾರ್ ಬಂದೊಡಂ ಕಾಯಲುಮೆರೆದವರ್ಗಾರ್ತಿಯೀಯಲುಂ ಮಾಡಿದಂತೋ
ಳೆರಡಂ ಧಾತ್ರಂ ಜನಕ್ಕಂತೆರಡು ಗುಣಮುಮಿಲ್ಲೆಂಬಿನಂ ಬರ್ದು ಬರ್ದಂ
ನರಕಾವಾಸಂಗಳೊಳ್ ದುರ್ಯಶಕೆ ಗುಱಿಯುಮಾಗಿರ್ದನೀಯುಕ್ತಿಮೆಯ್ವೆ
ತ್ತಿರೆ ಬರ್ದೇಬರ್ದೆಮೇಗೆಯ್ದಪುವೆಮಗೆ ವೃಥಾಮಾನದೋರ್ದಂಡಷಂಡಂ ೯

ಕುಲಮದಮೊಂದು ಜಾತಿಮದಮೊಂದು ವಯೋಮದಮೊಂದು ಸಂದ ದೋ
ರ್ಬಲಮದಮೊಂದು ರಾಜ್ಯಮದಮೊಂದಿನಿತುಂ ಮದಮೆಯ್ದೆ ಕೂಡೆ ಚಾ
ಪಲಿಸೆ ಮದೋದ್ಧತರ್ಕಳಿರಲಾಱದೆ ಪೇೞಿ ಬೆಸನಾವುದೆಂದು ಭೂ
ತಲಪತಿಯಂ ಕದರ್ಥಿಸಿದರಂಕದ ಷಷ್ಟಿಸಹಸ್ರನಂದನರ್ ೧೦

ಅಂತು ನಿಚ್ಚನಿಚ್ಚಂ ಕದರ್ಥಿಸೆ ನೀಮಿಂತು ಬೆಸಕೆಯ್ದಲ್ಲದಿರಿರಪ್ಪೊಡೆ ಕೈಲಾಸಪರ್ವತದೊಳ್ ಪ್ರಥಮತೀರ್ಥೇಶ್ವರತನೂಭವಂ ಪ್ರಥಮ ಚಕ್ರೇಶ್ವರಂ ಭರತರಾಜಂ ಅನೇಕರತ್ನಮಯಪ್ರತಿಮೆಗಳಂ ಮಾಡಿಸಿದವಕ್ಕೆ ನಿಮ್ಮ ಬಲ್ಲಂದದೆ ಭೂಮಿಗೋಚರರ್ಗಗೋಚರ[ಮ]ಪ್ಪಂತು ಕಾಪಂ ಮಾೞ್ಪುದೆನೆ ಮಹಾ ಪ್ರಸಾದಮಂತೆಗೆಯ್ವೆಮೆಂದು ಬೆಸನಂ ಬೇಡಿಕೊಂಡು ಬೀೞ್ಕೊಂಡು ಪೋಗಿ ದಿಕ್ಕರಿಕರಾಕಾರಭುಜದಂಡದಿದೋರ್ದಂಡರತ್ನದಿಂ ಕೈಲಾಸಮಂ ಬಳಸೆಯುಮ ಗುೞ್ಗಳುಮಂ ಮಾಡುತ್ತಿರ್ಪನ್ನೆಗಂ—

ಮಣಿಕೇತುವಿಂತೆಂದು ಬಗೆದಂ ಹಿತಪ್ರಿಯಮುಮಹಿತಪ್ರಿಯಮುಂ ಹಿತಾ ಹಿತಪ್ರಿಯಮುಮಹಿತಾಹಿತಪ್ರಿಯಮುಮೆಂಬ ಚತುರ್ವಿಧಕ್ರಮದೊಳ್ ಕಡೆಯೆ ರಡುಮಂ ಪತ್ತುವಿಟ್ಟು ಮೊದಲೆರಡುಮನನುರಕ್ತರಪ್ಪರೊಳ್ ಗುರುಮಂತ್ರಿ ಸಹಾಯಜನಂಗಳ್ಗೆ ನೆಗೞಲ್ವೇೞ್ಕುಮದಱಿಂ ಮದೀಯಪ್ರಿಯವಯಸ್ಯನೊಳತಿ

ರಹಸ್ಯದಿನಪ್ರಿಯವಾಗಿಯುಂ ಹಿತಮಪ್ಪುದಂ ನೆಗಟ್ಟಿಸೆಂದು ವಿಷದೃಷ್ಟಿ ವಿಷೋರಗಸ್ವರೂಪದಿಂ ಸಗರನಱುವತ್ತು ಸಾಸಿರ್ವರ್ ಮಕ್ಕಳುಮನೊಡನೆ ಕೃತಕದಿಂ ಭಸ್ಮಾವಲೇಪನವಾಗಿಮಾಡಿ ಭಗೀರಥನೊರ್ವನುಮಂ ವಾರ್ತಾ ನಿವೇದನಾರ್ಥಂ ಕಾದುಬುಪಿ ಕೃತಕಧರಾಮರವೇಷಧರನಾಗಿ ಮಣಿಕೇತು ಅಯೋಧ್ಯೆಗೆ ಬಂದು

ಅವಿಧಾ ಪಾರ್ವನನೊರ್ವನುಳ್ಳ ಮಗನಂ ನಿಷ್ಕಾರಣಂ ನಿರ್ಘೃಣಂ
ಜವನುಯ್ದಂ ಸಕಲಾವನೀವಲಯಮುಂ ಕಾವೀನೃಪಂ ಮತ್ತನೂ
ಭವನಂ ತಂದೆನಗೀಯವೇಳ್ಪುದವನಂ ತಂದೀಯದಂದಾನುಮಿ
ಲ್ಲಿ ವಿಮುಕ್ತಾಸುವೆನಪ್ಪೆನೆಂದೊದಱಿದಂ ರಾಜಾಲಯದ್ವಾರದೊಳ್ ೧೧

ಅಂತು ಕೆಯ್ಯ ತೊವಲ್ವಿರಸು ಮೆಯ್ಯಱಿಯದೆ ಪುಯ್ಯಲಿಡುವ ಪಾರ್ವನ ಪುಯ್ಯಲಂ ಆಸ್ಥಾನಮಂಟಪದೊಳೋಲಗಂಗೊಟ್ಟಿರ್ದರಸಂ ಕೇಳ್ದಿ ನ್ನೆವರಮೆನ್ನ ರಾಜ್ಯದೊಳೆಲ್ಲಿಯುಂ ಮಱೆದಪ್ಪೊಡಂ ಕೇಳ್ದಱಿಯೆನಿಂದ ಶ್ರುತಪೂರ್ವಮಪ್ಪ ಕರುಣಾಕ್ರಂದನಮಂ ಕೇಳ್ದೆನೆಂದು ವಿಸ್ಮಯಂಬಟ್ಟು ಧರಾಮರಂಗೆ ಬಱಿಯನಟ್ಟಿ ಬೆಸಗೊಳೆ

ಭರತನೃಪಂ ಮುನ್ನ ಧರಾ
ಮರಜನಮಂ ಪಡೆದನವನ ಪಡೆದಿರ್ದ ಧರಾ
ಮರವೇಷದೆನ್ನ ಸುವನು
ದ್ಧರಿಪುದು ನೀಂ ಸಗರ ದುಃಖಸಾಗರದಿಂದಂ ೧೨

ಪರಕೆಗಳನುಯ್ದು ಕೊಟ್ಟೆಂ
ಪರಮೇಶ್ವರಿಗಳ್ಗೆ ಪೋಗಿ ಪಾಱಿಂ ಬಿಟ್ಟೆಂ
ನರನಾಥ ಪುಣ್ಯಪುಂಜ
ಸ್ವರೂಪನಂ ಪಡೆದೆನೊರ್ವನಂ ನಂದನನಂ ೧೩

ಪಡೆದು ವಿವಾಹೋತ್ಸವಮಂ
ತಡೆಯದೆ ಮಾಳ್ಪಲ್ಲಿ ಬಂದು ಜವನೆಂಬ ಸಿಡಿಲ್
ಸಿಡಿಲೆಱಗಿದುದಾನುಂ ನಿ
ನ್ನಡಿಗೆಱಗಿದೆನೆನ್ನ ಮಗನನೀಯಲೆವೇಳ್ಕುಂ ೧೪

ಶರಣಾಗಾ ದ್ವಿಜನೆನ್ನಂ
ಕರುಣಿಸು ನೀನೆನ್ನ ಮಗನನಂತಕಪುರದಿಂ
ತರವೇಳ್ಪುದೆನಗೆ ಮರಣಂ
ಶರಣಂ ಮೇಣೆನಿತೆ ನಿನ್ನ ಚರಣಂ ಶರಣಂ ೧೫

ದ್ವಿಜವಂಶಮನಾ ಭರತಂ
ಸೃಜಿಯಿಸಿದಂ ಚಕ್ರವರ್ತಿ ನೀನುಂ ಚಕ್ರ
ಧ್ವಜನೈ ಬಡವನನೊರ್ವ
ದ್ವಿಜಸುತನಂ ದೇವ ಕಾವುದೇನರಿದಾಯ್ತೇ ೧೬

ಎಂದು ಕರುಣವಾಗಿ ಬಾಯಬಿಡು ಪುಯ್ಯಲ್ಚಿ ತನ್ನಂ ಮೂದಲಿಸಿ ನುಡಿಯೆಯಾ ದ್ವಿಜನ ನುಡಿಯಂ ಕೇಳ್ದು ವಿಸ್ಮಯಾಕ್ರಾಂತಸ್ವಾಂತನಾಗಿ

ಬೆಸಕೆಯ್ಯದ ಮಂಡಲಮಂ
ಬೆಸಕೆಯ್ಸಿಯುಮೆಱಗದವರನೆಱಗಿಸಿಯುಮುಪಾ
ರ್ಜಿಸಿದೆನ್ನ ಯಶಃಪ್ರಸರಂ
ಮಸುಳ್ವಂತಾಗಿರ್ಕುಮೀದ್ವಿಜನ್ಮನ ನುಡಿಯಿಂ ೧೭

ಬಡವಂ ಪಾರ್ವನಸತ್ಯಶೋಕವಿಕಳಂ ಬಂದೆನ್ನನೀಯಂದದಿಂ
ನುಡಿದಂ ಸತ್ತರನೆತ್ತಲಾರ್ಪರೊಳರರ್ಥಿಪ್ರಾರ್ಥನಾಭಂಗದಿಂ
ಕಿಡುಗುಂ ನಿರ್ಮಳಕೀರ್ತಿಲಕ್ಷ್ಮಿ ಪೆಱತೇನೇನೆಂದುಮೆಂತೆಂದುಮಿಂ
ನುಡಿಯಲ್ಕಾವುದುಮಿಲ್ಲ ಪಾರ್ವನೊಳಿದಕ್ಕೇಗೆಯ್ವೆನೆಂತಕ್ಕುಮೋ ೧೮

ಸತ್ತರನೆತ್ತುವುದೆಂಬುದ
ದೆತ್ತಣವಾತಘಟಮಾದುದೀಪಾರ್ವಂ ತಾ
ನೆತ್ತೆತ್ತ ಬಂದು ಮೂಡಿದ
ನೆತ್ತೆತ್ತೆನಗಿಸಿತು ದುರ್ಯಶಂ ಮಾಡಿದನೋ ೧೯

ಎಂದು ಚಿಂತಿಸುತಿರ್ದ ತಮ್ಮರಸನ ಚಿತ್ತವೃತ್ತಿಯನಱಿದು ಬುದ್ಧಿಸಾಗರ ನೆಂಬ ಪುರೋಹಿತನೆಂದನೆಂದುಂ ತಮ್ಮೊಳೋರೊರ್ವರಪ್ಪೊಡಂ ಸತ್ತಱಿಯದರ

ಮನೆಯ ಪುಲ್ಲಂ ಕಿರ್ಚುಮಂ ಕೊಂಡುಬರ್ಪುದು ಮೇಣ್ ಬರ್ಪೊಡಂ ನಿನ್ನ ಮಗನ ಪಡೆವೆನೆಂದೊಡಾನುಡಿಯನಱಿದುಮಱಿಯದಂತೆ ಕಿಱಿದಂತರಂಬರಂ ಪೋಗಿ ಮಗುೞೆ ಬಂದೆಲ್ಲಿಯುಂ ಪಡೆದೆನಿಲ್ಲೆಂಬುದುಮಾತನಂ ಮೆಲ್ಲಮೆಲ್ಲನೆ ಮಾತಾಡಿಸಿ

ಪಗಲಿರುಳೆಳಜೊನ್ನಂ ಕಾಳಮೆಂಬುಕ್ತಿ ಚಿತ್ರಂ
ಬುಗೆ ನೆರೆವರಗಲ್ವರ್ ಪುಟ್ಟುವರ್ ಪೊಂದುವರ್ ನೀಂ
ಬಗೆಯ ಮರುಳೆ ಕಾಳಾಭೀಳವಕ್ತ್ರಾಂತಮಂ ದಲ್
ಪುಗದರೊಳರೆ ಪೇೞ್ ನಿಮ್ಮಜ್ಜಪಜ್ಜರ್ಕಳಾರುಂ ೨೦

ಮಱವುದು ದುಃಖಮನಱಿಪಂ
ಮೆಱೆವುದು ಸೈರಿಪುದು ಮುಂತೆ ನೀಂ ಪೋಗಾನುಂ
ಪೆಱಗನೆ ಬಂದಪೆನೆಂಬೀ
ತೆಱನಲ್ಲದೆ ಜವನ ಬಾರಿಯೊಳ್ ಬರ್ದುಕುವರಾರ್ ೨೧

ಆರಾರಂ ನುಂಗಿದನಿ
ಲ್ಲಾರಾರಂ ನೋಣೆದನಿಲ್ಲ ಸವಿನೋಡಿದನಿ
ಲ್ಲಾರಾರಂ ಸುರಮಾನವ
ನಾರಕತಿರ್ಯಕ್ಸಮೂಹಮಂ ಯಮರಾಜಂ ೨೨

ಬಡವಂ ಬಾೞ್ಗೆಂಗುಮೊ ಸಿರಿ
ಯೊಡೆಯಂ ಮಾಣ್ಗೆಂಗುಮೋ ತಪಸ್ವಿಗಳಿವರಂ
ಕಡೆಗಣಿಸುವೆನೆಂಗುಮೊ ಪೆ
ಣ್ಬಡೆಯೆಂಗುಮೊ ತುೞಿದು ಪರಿಗುಮಂತಕರಾಜಂ ೨೩

ಆಯು ನೆಱೆವಿನೆಗಮಿರ್ಪನೆ
ಜಾಯೆಂಬನೆ ಮಾಣ್ಬೆನಿಂದಿನೊಂದೆವಸಮನ
ಧ್ಯಾಯಂ ಮಾಡುವೆನೆಂಬನೆ
ಬಾಯೞಿದೞಿಯುೞೆ ಜನಂಗಳಂ ಜವನುಯ್ವಂ ೨೪

ಏಂ ನಿಷ್ಕರುಣಿಯೊ ಪಸುಮಗ
ನೆನ್ನದೆ ಮುತ್ತಾಣ್ಮನೆನ್ನದಱಿವುಳ್ಳಂ ಬಾ
ಲ್ತೆನ್ನದೆ ಮರುಳಕ್ಕಟ ಮಾ
ಣೆನ್ನದೆ ಮುಂಬಿಟ್ಟು ಕೊಂದಪಂ ಯಮರಾಜಂ ೨೫

ಕುಲಜಂ ಕುಲಹೀನನಿವಂ
ಕಲಿ ಪಂದೆಯಿವಂ ಮಹಾಭಿಮಾನಿಯಿವಂ ನಾ
ಣಿಲಿಯಿವನೆನ್ನದೆ ಪಲರಂ
ನಲಿನಲಿದಾಟಂದು ಕೊಂದಪಂ ಯಮರಾಜಂ ೨೬

ಕಟ್ಟಿದ ಕುಱಿಗಳ್ ಬೋನದೊ
ಳಟ್ಟೇಱಿಸಿ ಬಯ್ತ ಬಾಡುಗಳ್ ಬಡ್ಡಿಸಿ ತಂ
ದಿಟ್ಟಾ[ಖಾ]ದ್ಯಂಗಳ್ ಮುಂ
ದಿಟ್ಟ ನಿವೇದ್ಯಂಗಳಂತಕಂಗೆ ಜನಂಗಳ್ ೨೭

ಮೊಱೆಯಿಡೆಯಿಡೆ ಕೂಗಿಡೆಯಿಡೆ
ದಱದಱಮೆಂದೆಲೞಿದು ಪುಯ್ಯಲಿಡೆಯಿಡೆ ಕೊಲ್ಗುಂ
ಕುಱಿಯಂ ಕೊಲ್ವಂತಿರೆ ತಿಱಿ
ಕೊೞೆಗೊಂಡು ಜಗಜ್ಜನಂಗಳಂ ಯಮರಾಜಂ ೨೮

ಮೃತಪಟಹಂ ಜಯಪಟಹಂ
ಚಿತಾಗ್ನಿಧೂಮಂ ಜಯಧ್ವಜಂ ಜನಕರುಣಾ
ರುತಿ ಜಯಮಂಗಳರುತಿಯೆನೆ
ಕೃತಾಂತರಾಜಂಗೆ ರಾಜ್ಯಚಿಹ್ನಮಿದಲ್ತೇ ೨೯

ಆ ಜಗದೇಕಕಂಟಕನನಾ ಬಹುಭಕ್ಷಿಯನಾ ತ್ರಿಲೋಕಪಂ
ಕೇಜಸಮುತ್ಥಜೀವಮುಕರಂದಮುದಾಳಿಯನಾ ಪರಿಸ್ಫುರ
ತ್ತೇಜನನಂಗಜಾಂತಕನಮೋಹನಘಾಂತಕನಂತಕಾಂತಕಂ
ಶ್ರೀಜಿನರಾಜನಲ್ಲದುೞಿದೊಂ ಗೆಲಲಾರ್ಕುಮೆ ಮೃತ್ಯುರಾಜನಂ ೩೦

ಎಂದು ಬುದ್ಧಿಸಾಗರನುಂ ತನಗೆ ಸಂಸಾರಸ್ವರೂಪಮನಱಿಪಿ ಸದ್ಧರ್ಮೋಪದೇಶಂಗೆಯ್ದಾಗಳಾ ಬ್ರಾಹ್ಮಣನಿವರಸಿವರ ನುಡಿಯೊಳ್ ತೊಡರ್ಚುವೆನೆಂದು

ಈ ನಿನ್ನ ಪೇಟ್ದ ಧರ್ಮಮಿ
ದೇನೆನಗೆಯೊ ನಿನಗಮುಂಟೊ ನಿನಗುಳ್ಳೊಡದಂ
ನೀನಱಿಪುವುದೆನೆ ದರಹಸಿ
ತಾನನನೆಂದಂ ನರೇಂದ್ರನೆನಗದು ಮುನ್ನಂ ೩೧

ಉಂಟೆಂಬುದುಂ ನಿನ್ನಱುವತ್ತು ಸಾಸಿರ್ವರ್ ಮಕ್ಕಳುಮಿಂದು ದೃಷ್ಟಿವಿಷವಿಷಮವಿಷಧರನಿಂ ಭಸ್ಮಾವಶೇಷರಾದರೆಂಬುದುಂ ಸಂಸಾರಿಜೀವಂಗಳೆಂದು ಪುಟ್ಟಿದರಂದೆ ಸತ್ತರೆಂಬುದಿದೇಂ ಚೋದ್ಯವೆಂದುಂ ಮುನ್ನಿನಂತೆ ಧರ್ಮಕಥಾಕಥನದೊಳಿರ್ಪನ್ನೆಗಂ

ಅಶ್ರುಜಲವಿಲುಳಿತವಿಲೋಚನನುಮಪಗತೋತ್ತರೀಯನುಂ ಮನ್ಯುದ್ಗತಕಂಠನುಮತಿಪ್ರಚುರವಿಪ್ರಲಾಪಾಕ್ಷರಮುಖರಮುಖನುಮಸಹ್ಯಶೋಕಪಾವಕಶಿಖಾಕಲಾಪಸಂತಪ್ಯಮಾನಮಾನಸನುಂ ಭಗ್ನಮನೋರಥನುಮಾಗಿ ಭಗೀರಥಂ ಬಂದು ತಂದೆಯ ಮುಂದೆ ಮೆಯ್ಯನೀಡಾಡಿ

ಬೆಸನೆಂದು ಪೂಣ್ದು ದೇವರ
ಬೆಸನಂ ಸುಕುಮಾರರೆನಿಪ ರಾಜಕುಮಾರರ್
ಬೆಸದಪ್ಪಿದರೆನಗನಿತೊಂ
ದು ಸೈಪು ಸಮನಿಸದೆ ಬರ್ದುಕ್ಕಿ ಬಂದೆಂ ನೃಪತೀ ೩೨

ಎನಲೊಡಮಾ ಮಾತಂ ಕೇ
ಳ್ದನಭ್ರವಜ್ರಾಭಿಘಾತಮಾದಂತೆ ಸಭಾ
ಜನಮೆಲ್ಲಂ ಮೋಹಿಸೆ ಭೋಂ
ಕೆನೆ ಹಾಹಾಕ್ರಂದಮೊಗೆದುದಂತಃಪುರದೊಳ್ ೩೩

ಅವಿರಳಗಳದಶ್ರುಜಲ
ಪ್ರವಾಹಮುದ್ಧೃಪ್ತ ಪುತ್ರಶೋಕಾವೇಗಂ
ದಿವಸಂ ಕೆಡೆದಿರ್ದುದು ಷ
ಣ್ಣವತಿಸಹಸ್ರಾಂಗನಾಳಿ ನೃಪನಡಿವೊದಲೊಳ್ ೩೪

ನಿನಗೆ ಚತುರ್ದಶರತ್ನಂ
ಜನೇಶ ಬೆಸಕೆಯ್ವುಮಮರರೆಲ್ಲಂ ಬೆಸನೇ
ನೆನುತಿರ್ಪರ್ ಬೆಸದಪ್ಪಿದ
ತನೂಜರಂ ಜವನೊಳಿಱಿದು ಬರಿಸಲ್ವೇಳ್ಕುಂ ೩೫

ಬಾಳಂ ಕಿತ್ತಂಜಿಸಿ ಬಾ
ಯ್ಕೇಳಿಸಿ ಷಟ್ಖಂಡಭರತಮಂ ಕಲಿಯೈ ಬ
ಲ್ಲಾಳನೆ ನೆಗಱ್ದೈ ಧರಣೀ
ಪಾಳ ನಿಜಾತ್ಮಜರನೇಕೆ ರಕ್ಷಿಸದಿರ್ಪೈ ೩೬

ಎಲ್ಲಿತ್ತೊ ಚಕ್ರರತ್ನಮ
ದೆಲ್ಲಿತ್ತಸಿರತ್ನಮಶ್ವಗಜರತ್ನಂ ತಾ
ಮೆಲ್ಲೆತ್ತವೋಯ್ತೊ ಜಗತೀ
ವಲ್ಲಭ ನಿಜಸುತರನುಱದೆ ಜವನುಯ್ವಾಗಳ್ ೩೭

ನಿನಗಂ ಬಲ್ಲಿದರೊಳರೇ
ನಿನಗಂ ಮಾರ್ಮಲೆವರೊಳರೆ ನಿನಗಂ ತಲೆದೋ
ರ್ಪನಿತಮರರೊಳರೆ ನಿಜನಂ
ದನರಂ ನೀನಿರೆ ನೃಪೇಂದ್ರ ಕೊಲ್ವರುಮೊಳರೇ ೩೮

ಉರಿದಱದಪ್ಪುದು ಎಮ್ಮಯ
ಶರೀರಮೋವೆಮ್ಮ ಪುತ್ರಶೋಕಾನಲನಿಂ
ನರಪಾಲ ಮತ್ತಮನಲಾಂ
ತರಮೇವುದೊ ದಗ್ಧವಾರಿಯೆಂಬುದುಮುಂಟೇ ೩೯

ಕುಡುವುದು ಕಿಚ್ಚಂ ದೇವರ್
ತಡೆಯದೆ ಕತ್ತಿಗೆಯನೆಮಗೆ ಬೆಸಸುವುದಿನ್ನೇಂ
ಪಡೆಮಾತೊ ತನಯರಿಲ್ಲದೆ
ತಡೆದಿರ್ಪುದು ತಕ್ಕುದಲ್ತು ಭುವನಾಧಿಪತೀ ೪೦

ಒಗೆದ ಪತಿವಿರಹತಾಪದೆ
ಪುಗಲಿರ್ದರ್ ಜಿನಗೃಹಂಗಳಂ ಶಿಖಿಶಿಖೆಯಂ
ಪುಗಲಿರ್ದ ಸೊಸೆವಿರೆಲ್ಲರ
ಮೊಗಂಗಳಂ ದೇವ ನೋಡಿ ಕರುಣಿಸವೇಡಾ ೪೧

ಪಡೆವುದು ಮೇಣ್ ನಂದನರಂ
ನಡೆವುದು ಮೇಣ್ ತಪಕೆ ಸಗರವಲ್ಲಭ ಮತ್ತೇಂ
ಪಡೆವುದೊ ತನಯರ್ಕಳ ಪಿಂ
ಬಡಿನೊಳ್ ಪೇೞಿಮಗರಸ ಮಾನಸವಾೞೀ ೪೨

ಎಂದು ವಿಪ್ರಲಾಪಂಗೆಯ್ಯೆ

ಜನಪಾಂತಃಪುರಕಾಂತಾ
ಜನವದನಸರೋಜಮಶ್ರುಜಲಕಣಮುಮನಾಂ
ತನುಕರಿಸಿರ್ದುದು ಹಿಮಬಿಂ
ದುನಿಚಿತಹೈಮಂ ಸರೋಜವನವಿಭ್ರಮಮಂ ೪೩

ಅರಸಿಯರ ಕಣ್ಣನೀರ್ಗಳ
ಬೆರಸಿದ ಕಾಡಿಗೆಯ ಕರ್ಪು ಪೋಲ್ತತ್ತು ಕುಚಾಂ
ತರದೊಳ್ ಬೀೞುತ್ತುಂ ತ
ತ್ಪರಿತಾಪಜ್ವಲನಧೂಮ್ರಧೂಮಚ್ಛವಿಯಂ ೪೪

ದವರೌದ್ರಜ್ವಲನಾದ್ಭುತಂ ಹೃದಯದೊಳ್ ಶೋಕಾಗ್ನಿ ಕೈಗಣ್ಮೆ ಪೊ
ಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆಱದಿಂದಂ ಕಣ್ಗಳಿಂದುಣ್ಮಿ ಪೊ
ಣ್ಮುವ ನೇತ್ರಾಂಜನಮಿಶ್ರಬಾಷ್ಪಜಲಧಾರಾಬಿಂದುಗಳ್ ಕೂಡೆ ಕಂ
ಠವಿಮುಕ್ತಚ್ಯುತ ನೀಲಕಂಠಿಕೆವೊಲಾಯ್ತಂತಃಪುರಸ್ತ್ರೀಯರಾ ೪೫

ಅರಸನನೋಲಗಿಸುತ್ತಾ
ದರದಿಂದಂ ಮುಗಿದ ಕೆಯ್ಯುಮೆಱಗಿದ ತಲೆಯುಂ
ಬೆರಸಿಪ್ಪರಸುಗಳಿರದೆಱ
ಗಿರೆ ತಲೆಯುಮನೆತ್ತದೆಱಗಿ ಶೋಕಾಕುಳಿತರ್ ೪೬

ಅನಿತೊಂದು ಶೋಕವೇಗಂ
ತನಗಾಗೆಯುಮಚಲಿತಸ್ವರೂಪನಿರ್ದಂ
ಕನಕನಗಂಬೊಲ್ ಸಗರನ
ಮನಮಂ ಸಾಗರದ ಗುಣ್ಪನಱಿವರುಮೊಳರೇ ೪೭

ಅನಿಲಾಹತಿಯಿಂ ಚಳಿಯಿಕು
ಮನೋಕಹಾನೀಕಮದ್ರಿ ಚಳಿಯಿಕುಮೆ ಪೃಥ
ಗ್ಜನದಂತುದಾತ್ತಚಿತ್ತಂ
ಜನಪತಿ ಧೈರ್ಯಾಂಬುರಾಶಿ ಚಳಿಯಿಸಿದಪನೇ ೪೮

ಬಳಸಿದ ಪೊರಟ್ಟಂಗನೆಯರ
ಬಳಗದಿನವರಶ್ರುಜಲದಿನನಿಲಾಹತಿಚಂ
ಚಳಲತೆಯಂ ನಿರ್ಝರಮುಮ
ನೊಳಕೊಂಡ ಸುವರ್ಣಗಿರಿಯನರಸಂ ಪೋಲ್ತಂ ೪೯

ಅವಿವೇಕಿಗಳ ಮನಂಗಳ
ನವಿರಳ ಬಹಳಸ್ವರೂಪಮಜ್ಞಾನತಮಂ
ಕವಿದತ್ತರಸನ ಮನಮಂ
ವಿವಿಕ್ತವಿಶದಮನದೆಂತುಮಾಱದೆ ಪೊರ್ದಲ್ ೫೦

ಘೋರತಮಮೊಡ್ಡಿಸುವೊಡಾ
ತಾರಕಮಂಡಳಮನೊಡ್ಡಿಕುಂ ಗಗನಾಲಂ
ಕಾರನನುಜ್ವಲತೇಜೋ
ಭಾರನನೇನಹಿಮಕರನನೊಡ್ಡಿಸಿದಪುದೇ ೫೧

ಅಂತು ಧೈರ್ಯಾವಷ್ಟಂಭಗಂಭೀರನಾಗಿ

ಅರಸ ಕೃತಾಂತನುಯ್ದು ಸುತರಂ ಪಡೆದೀಯೆಮಗೆಂದು ಕಾಂತೆಯರ್
ನುಡಿದಪರೆನ್ನ ಪೆತ್ತ ಮಗನಂ ಪಡೆದೀಯೆನಗೆಂದು ಪಾರ್ವನುಂ
ನುಡಿದಪನಯ್ಯ ಸತ್ತವರನೆತ್ತುವರಾರ್ ಮತಿಗೆಟ್ಟರಕ್ಕಟಾ
ಬಡವುಗಳೀ ಕುಲಾಂಗನೆಯರೀ ಬಡಪಾರ್ವನ ನಂಟರಾಗರೇ ೫೨

ಎಂದು ಸಮಶೀಲವ್ಯಸನೇಷು ಸಖ್ಯಮೆಂದವರ ದೀನಾನನಂಗಳಂ ನೋಡಲಾಱದೆ ಮನಮಂ ಬಲಿದು ನಿಲೆ

ಪರಿಜನಮುಂ ಪುರಜನಮುಂ
ನೆರೆದನಿಬರ್ತನ್ಮೊಳರಸನೇಂ ಕಲ್ಲೆರ್ದೆಯೋ
ಮರವಾನಿಸನೋ ಕಲ್ಲುಂ
ಮರನಿರ್ಪಂತಿರ್ದ[ನೆನಿ]ತು ನಿಷ್ಕರುಣನೊ ಪೇೞ್ ೫೩

ಎಂಬ ಜನಾಪವಾದಮುಂ ಕೇಳ್ದು ಬುದ್ಧಿಸಾಗರಂ ಸಗರನ ಮೇಲೆ ಸಿತ ಸರ್ಪಂಗಳನಿೞಿಯೆ ಸುರಿವುದುಂ ತಪ್ತಾಯಃಕಟಾಹಪತಿತಲಾಜಪುಂಜ ದಂತೆ ದೆಸೆದೆಸೆಗೆ ಚಿಳಿಲ್ಚಿಳಿಲೆನೆ ಸಿಡಿಲ್ದು ಪಾಱುವುದುಮೋರೊರ್ವರ್ಗೋ ರೊರ್ವರ್ ಮಕ್ಕಳ ದುಕ್ಕಮಂತರಸಂಗಱುವತ್ತುಸಾಸಿರ ಮಕ್ಕಳ ದುಕ್ಕಂ ಸಾಮಾನ್ಯಮಕ್ಕುಮೆ ಮಹಾಸತ್ತ್ವನುಂ ಧೈರ್ಯಾಂಬುರಾಶಿಯುಮಪ್ಪುದಱಿಂ ದಸಹ್ಯಮಪ್ಪ ದುಃಖೋದ್ರೇಕಮುಂ ಸೈರಿಸಿರ್ದನೆಂದು ಸಕಲಜನಕ್ಕೆಲ್ಲಂ ಪ್ರಕಟಂಮಾಡೆ ಸಗರನಾಬ್ರಾಹ್ಮಣಂಗಮಂತಃಪುರಕ್ಕಂ ಮಱುಮಾತುಗುಡ ಲಱಿಯದೆ ಮೌನಂ ಸರ್ವಾರ್ಥಸಾಧನಮೆಂಬುದಂ ಮನದೊಳ್ ಬಗೆದು

ಕಡೆಯೆಯ್ದಿತ್ತಿನಗಿಂದು ರಾಜ್ಯವಿಭವಂ ಪೊಣ್ಮಿರ್ದ ಮೋಹೋದಯಂ
ತಡಿಸಾರ್ದಿರ್ದಪುದಕ್ಕೆ ಮಂಗಳಮುಹಾಶ್ರೀ ಪೋಪೆನೀಗಳ್ ತಪಂ
ಬಡಲೆಂದುತ್ತಮಸತ್ತ್ವನೂರ್ಜಿತಗುಣಂ ಸಿಂಹಾಸನಂ ಭೇರಿ ಬೆ
ಳ್ಗೊಡೆಯಿಂತೆಲ್ಲಮನೊಲ್ಲದಿರ್ದನರಸಂ ತಳ್ವಿಲ್ಲದಾಸ್ಥಾನದೊಳ್ ೫೪

ಶ್ರೀಮಹಿತಮಹೀರಾಜ್ಯ
ವ್ಯಾಮೋಹಂ ಮಾಣ್ಗೆ ಶರಣಮಕ್ಕೆಮಗಜಿತ
ಸ್ವಾಮಿ ಭವಭಯಹರಂ ಸಕ
ಳಾಮರಜನವಿನುತಚರಿತನಪಗತದುರಿತಂ ೫೫

ಎಂದು ತಱಿಸಂದು ಷಟ್ಖಂಡಮಂಡಳಮಹೀಮಂಡಳೇಶ್ವರನಾಸ್ಥಾನ ಮಂಡಪದಿನೆರ್ದು ದೀಕ್ಷಾಗ್ರಹಣಮನೋರಥಂ ಮಹಾರಥಂ ಭಗೀರಥಂಗೆ ಸಾಮ್ರಾಜ್ಯಪದವಿಯಂ ದಯೆಗೆಯ್ದು

ಜಳಧಿತರಂಗತಾಟಿತಮಹೀಮತಿ ಚಕ್ರಧರಂ ತಪಂಬಡಲ್
ತಳರ್ವುದುಮೀಗಳಿನ್ನ ಬಗೆ ಕೂಡಿದುದಸ್ತಭವಾಬ್ಧಿ ಮಾಡಿದೆಂ
ಕೆಳೆಯನನೆಂದು ಸಂತಸದಿನಾಮಣಿಕೇತು ವಿಚಿತ್ರಕೇತುಗಳ್
ಮಿಳಿರೆ ವಿಚಿತ್ರನರ್ತನಮನಾಡಿಸಿದಂ ಖಗಮಾರ್ಗರಂಗದೊಳ್ ೫೬

ಆಗಳ್ ಸಗರಚಕ್ರವರ್ತಿ ದೀಕ್ಷಾಗ್ರಹಣದೃಢಚಿತ್ತನಾಗಿ ದೃಢಧರ್ಮರೆಂಬ ಕೇವಳಿಗಳ ಪಕ್ಕದೆ ಸರ್ವಸಂಗಪರಿತ್ಯಾಗಪುರಸ್ಸರಂ ಸಂಯಮಮಂ ಕೈಕೊಂಡಂ

ಇತ್ತ ಕಪಟಬ್ರಾಹ್ಮಣನುಂ ತನ್ನ ವಿಕ್ರಿಯೆಯಿಂ ಮಱೆದಿರ್ದ ಕುಮಾರ ರಲ್ಲಿಗೆ ಕಾಳೆಗಕ್ಕಮೊಳಂ ಪುಯ್ಯಲ್ಗಮೊಳನೆಂಬಂತೆ ಬೇಗಂ ಬಂದು ಚಕ್ರಧರ ದೀಕ್ಷಾಗ್ರಹಣಮನಱಿಪಲೊಡಂ ಅವರುಮಂತೆ ಸಂವೇಗನಿರ್ವೇಗಪರರಾಗಿ ದೃಢಧರ್ಮಕೇವಳಿಗಳ ಸನ್ನಿಧಿಯೊಳ್ ತಪೋನಿಧಿಗಳಾದರ್

ಆ ವ್ಯತಿಕರಮಂ ಭಗೀರಥಂ ಕೇಳ್ದು ತಾನುಮವರಲ್ಲಿಗೆ ಬಂದು ಪಂಚ ಮುಷ್ಟಿಯಿಂ ಬಂದಿಸಿ ಕುಳ್ಳಿರ್ದು ಧರ್ಮಶ್ರವಣಾನಂತರಂ ಪೇಲ್ಮೆನಗೆ ಕರ್ಮಪ್ರಕೃತಿಯುಮಂ ಲೋಕವಿಭಾಗಮುಮಂ ಜೀವಸ್ವರೂಪಮುಮನ ಱಿಯೆ ಬೆಸಸುವುದೆಂದು ಮುಕುಳಿತಾಂಜಲಿಯಾಗಿ ಬಿನ್ನಪಂಗೆಯ್ದಾಗಳ್

ವದನೇಂದುಸುಧಾರಸಮೆನೆ
ವದನಾಬ್ಜಾಮೋದಮೆನೆ ಮುನೀಶ್ವರಮುಖದಿಂ
ಹೃದಯಂಗಮುವಚನಾಮೃತ
ಮುದಯಿಸಿದುದು ಸಕಲಭವ್ಯಸಂತೋಷಕರಂ ೫೭

[ಅದಂ ಕೇಳ್ದು]

ಬಗೆಯೊಳ್ ಧರ್ಮಾನುರಾಗಂ ನೆಗಲ್ಚೆ ನೃಪಸಭಾಸೇವ್ಯನಾಸನ್ನಭವ್ಯಂ
ವಿಗಳದ್ಬಾಷ್ಪಾಂಬುನೇತ್ರಂ ವಿಪುಳಪುಳಕಸಂದೋಹಸಂಛನ್ನಗಾತ್ರಂ
ಸಗರಕ್ಷ್ಮಾಪಾಲಪುತ್ರಂ ಸಕಲವಸುಮತೀಪ್ರಾಜ್ಯಸಾಮ್ರಾಜ್ಯಪಾತ್ರಂ
ವಿಗತವ್ಯಾಮೋಹಭೇದಂ ಜಿನಪತಿಮತಮಂ ಕೇಳ್ದು ಸಂತುಷ್ಟನಾದಂ ೫೮

ಅಂತು ಸಂತುಷ್ಟಚಿತ್ತನಾಗಿ ಸಕಲಶ್ರಾವಕವ್ರತಂಗಳೊಳ್ ಪರಿಪೂರ್ಣನಾಗಿ ದೃಢಧರ್ಮಕೇವಳಿಗಳಂ ಪೂಜಿಸಿ ಪೊಡೆವಟ್ಟು ಮನೋರಥಂಬೆರಸು ಭಗೀರಥಂ ಪೋದಂ

ಆಗಳ್ ಮಣಿಕೇತು ತನ್ನ ಗೆಯ್ದ ಪಟ್ಟಪಂಚಮಂ ಪ್ರಕಟಂ ಮಾಡಿ ನಿಶ್ಶಲ್ಯಂಗೆಯ್ದು ನಿಜನಿವಾಸಕ್ಕೆ ಪೋದಂ

ಇತ್ತ ಸಗರಮುನಿವೆರಸಱುವತ್ತು ಸಾಸಿರಕುಮಾರಮುನಿಗಳುಮಾಚರಮದೇಹಧಾರಿಗಳಾತನ ಪರೋಪಕಾರಬುದ್ಧಿಯುಮಂ ಇಷ್ಟಂ ಧರ್ಮೇಣ ಯೋಜಯೇತ್ ಎಂಬ ವಾಕ್ಯಮುಮಂ ನೆನೆದಾ ಕಲ್ಯಾಣಮಿತ್ರನಪ್ಪೊಡಿಂತಾಗಲ್ವೇಳ್ಕುಮಾತನಂತು ನಮಗೆ ಪರೋಪಕಾರಿಗಳಾರುಮಿಲ್ಲಮನಂತಸಂಸಾರಚಕ್ರದೊಳ್ ತಿಱ್ರನೆ ತಿರಿವ ನಮ್ಮನಿಬರುಮನಪವರ್ಗಮಾರ್ಗಮಂ ಕಾಣಿಸಿದನೆಂದು ಪರಮಾನಂದಭರಿತರಾಗಿ ಪೊಗಳ್ದು ಸಮ್ಮೇದಾಗ್ರದೊಳುಗ್ರೋಗ್ರತಪದೊಳ್ ನೆಗಳ್ದು ಕೆಲವುಕಾಲದಿಂ ಸಗರಮುನಿಕುಂಜರಂ ಸಂಸಾರಬಂಧಕಾರಣನಿಗಳಬಂಧಂಗಳಂ ಪಱಿಯೆ ಪೊಯ್ದು ಕರ್ಮವೀರರಂ ಬೆವಱೆ ಬೆಂಕೊಂಡು ಸನ್ಮಾರ್ಗವೀಧಿಯೊಳ್ ಪರಿದು ಪರಮಗತಿಯನೆಯ್ದುವುದುಂ

ತದನಂತರಮೆ ತನಗೊಡವುಟ್ಟಿದ ಕುಮಾರಮುನಿಗಳನಿಬರುಮನು ಕ್ರಮದಿಂ ಮುಕ್ತಿಗೆ ಸಂದರೆಂಬುದಂ ಭಗೀರಥಂ ಕೇಳ್ದು ನಿರ್ವೇಗಪರನಾಗಿ ವರದತ್ತನೆಂಬ ನಿಜತನೂಜಂಗೆ ರಾಜ್ಯಭಾರಮಂ ಕೊಟ್ಟು ತಪೋಭಾರಮಂ ಕೆಯ್ಕೊಳಲೆಂದು ಕೈಲಾಸಶೈಲಕ್ಕೆ ಬಂದು ಶಿವಗುಪ್ತಮುಮುಕ್ಷುಗಳ ಸಮಕ್ಷದೊಳ್ ದೀಕ್ಷೆಯಂ ಕೈಕೊಂಡು ಉಗ್ರೋಗ್ರತಪದೊಳ್ ತಪಮನೆತ್ತಿಕೊಂಡಲ್ಲಿ ಕೇವಲಜ್ಞಾನೋತ್ಪತ್ತಿಯಾಗೆ ಚತುರ್ವಿಧದೇವನಿಕಾಯಂ ಬಂದು ಕೇವಳಿಗಳ್ಗೆ ಸುಧಾಪಿಂಡಪಾಂಡುರಮಪ್ಪ ದುಗ್ಧಾಬ್ಧಿಜಲದಿಂ ಪಾದಾಭಿಷೇಕಂಗೆಯ್ಯೆ

ತದಮಲಜಲಪ್ರವಾಹಸಂಗದಿಂ ಗಂಗಾಜಲಂ ಜಗನ್ಮಂಗಳವಾದುದಂದಿಂದಿತ್ತ ಗಂಗೆಯಂ ಭಗೀರಥಂ ತಂದನೆಂಬ ಲೋಕಪ್ರಸಿದ್ಧಿಯಾಗೆ ಭಾಗೀರಥಿಯೆಂದು ಕೊಂಡಾಡಿದರ್ ಭಗೀರಥ ಕೇವಳಿಯುಂ ಕೆಲವು ಕಾಲಕ್ಕೆ ಕರ್ಮಕ್ಷಯಂಗೆಯ್ದು ಮೋಕ್ಷಲಕ್ಷ್ಮೀಕಟಾಕ್ಷ ವಿಕ್ಷೇಪಲಕ್ಷಿತಸುಖಮಯಶರೀರನಾಗಿರ್ದಂ

ಇತ್ತ ವರದತ್ತಮಹಾರಾಜಂ ತಮ್ಮಜ್ಜನಪ್ಪ ಸಗರಚಕ್ರವರ್ತಿಯ ತಮ್ಮಯ್ಯನಪ್ಪ ಭಗೀರಥನ ಸಾಮ್ರಾಜ್ಯಪದವಿಯಂ ತಾಳ್ದಿ ಪರಮೇಶ್ವರ ಧರ್ಮಪ್ರಭಾವನೆಯಂ ಪ್ರತಿದಿನಂ ಪ್ರವರ್ಧಮಾನ ಮಹೋತ್ಸವಮಂ ಮಾಡಿಸಿಯುಂ ಸರ್ವಜನಭವ್ಯಜನಂಗಳಭ್ಯುದಯಪರಂಪರಾಭಿವೃದ್ಧಿಯನ ತ್ಯಧಿಕಂ ಮಾಡಿಯುಂ ಮತ್ತಮಿಂತು

ಪರಮಶ್ರೀ ಜೈನಧರ್ಮೋನ್ನತಿ ಸಗರನಿನೆಮ್ಮಯ್ಯನಿಂ ಸಂದುದಿಂತೀ<br>
ಧರೆಗಾನುಂ ಕೂಡೆ ಕೊಂಡಾಡುವೆನಿದನದಱಿಂದೆನ್ನ ರಾಜ್ಯೋದಯಂ ಬಿ<br>
ತ್ತರಿಸುತ್ತಿರ್ಕುಂ ಮಹೀಮಧ್ಯದೊಳೆನುತುಮತಿಪ್ರೀತಿಯಿಂ ಧರ್ಮಚಿತ್ತಂ<br>
ವರದತ್ತಂ ದಾನಚಿಂತಾಮಣಿಯೆನಿಸಿ ಯಶೋಭಾರಮಂ ತಾಳ್ದಿ ನಿಂದಂ ೫೯

ಕತೆಯೊಳಗಱಿಯದೆ ವಿಪರೀ<br>
ತತೆಯಿಂದಂ ಪೇಳ್ದ ಕೃತಿಗಳಿರ್ಕೆ ಪುರಾಣ<br>
ಸ್ಥಿತಿಯೊಳೆ ಕವಿರತ್ನನಿನ<br>
ನ್ವಿತವಾದುದು ಸಗರಚಕ್ರವರ್ತಿಯ ಚರಿತಂ ೬೦

ಸಗರಸುತರೆಲ್ಲರುಂ ಮೋ<br>
ಕ್ಷಗಾಮಿಗಳ್ ಚರಮದೇಹಧಾರಿಗಳಂತಾ<br>
ಬಗೆಗೆಟ್ಟವಂದಿರಂ ಪ<br>
ನ್ನಗರಾಜಂ ಕೊಂದನೆಂಬುದಪಸಿದ್ಧಾಂತಂ ೬೧

ಈ ದೊರೆಯ ಕಥಾನಾಯಕ<br>
ನೀದೊರೆಯ ಮಹಾಪ್ರಸಿದ್ಧಕವಿ ಪೋದರೊಳಿ<br>
ಲ್ಲಾದರೊಳಿಲ್ಲಪ್ಪರೊಳಿ<br>
ಲ್ಲೀದೊರೆಯವು ಕೃತಿಗಳಿಲ್ಲ ಸದಲಂಕೃತಿಗಳ್ ೬೨

## ೫. ದಾನಚಿಂತಾಮಣಿ ಅತ್ತಿಮಬ್ಬೆ

ಅಜಿತಜಿನಪದಪಯೋರುಹ
ರಜಸ್ಸಮಾಸಂಗಿಭೃಂಗಿ ಗುಣಶೀಲದಯಾ
ಧ್ವಜೆಯೆಂದು ನಾಡೆ ಸುವಿನೇ
ಯಜನಂ ಬಣ್ಣಿಪುದು ದಾನಚಿಂತಾಮಣಿಯಂ ೧

ದಿಗಿಭದೊಳಗಮರಕರಿ ದಾ
ನಿಗಳೊಳಗಗ್ಗಳವ ದಾನಚಿಂತಾಮಣಿ ಚ
ಕ್ರಿಗಳೊಳಗಾಹವಮಲ್ಲಂ
ಮಿಗಿಲೆನಿಕುಂ ವಿಷಯದೊಳಗೆ ವೆಂಗೀವಿಷಯಂ ೨

ಜಳಧಿತರಂಗತಾಡಿತಮಹೀತಳದೊಳ್ ನೆಗಳ್ದಿತ್ತು ವೆಂಗಿಮಂ
ಡಳಮದಱೊಳ್ ಜಿತಾನ್ಯವಿಷಯಂ ನೆಗಳ್ದಿರ್ದುದು ಕಂಮೆದೇಶಮ
ಗ್ಗಳಿಕೆಯ ಕಂಮೆದೇಶಮನಲಂಕರಿಸಿರ್ದುದು ಪುಂಗನೂರ್ ಜಗ
ತ್ತಿಳಕಮದರ್ಕೆ ಮುಖ್ಯಮೆನೆ ಪೆಂಪೆಸೆದಿರ್ದುದು ನಾಗಮಯ್ಯನಾ ೩

ನಾಗಮನರ್ಥಿಮಯೂರಘ
ನಾಗಮನಧಿಗತವಿನೇಯಜನಹಿತಕರಜೈ
ನಾಗಮನನುಕರಿಪೊಂ ದಿ
ಙ್ನಾಗಮನಕ್ಷುಣ್ಣಭದ್ರಲಕ್ಷಣಗುಣದಿಂ ೪

ಆ ನೆಗಳ್ದ ನಾಗಮಯ್ಯನ
ಸೂನುಗಳಿರ್ವರೆ ದಲವರೊಳಗ್ರಸುತಂ ವಿ
ದ್ಯಾನಿಧಿ ಮಲ್ಲಪನನುಜನ
ನೂನಗುಣಂ ಪೊನ್ನಮಯ್ಯನಣ್ಣನ ಭಕ್ತಂ ೫

ನೃಪಶಾಸ್ತ್ರಜ್ಞತೆಗಿಲ್ಲಿ ಮಲ್ಲಪನೊಳಶ್ವೇಭಾಗಮಕ್ಕಿಲ್ಲಿ ಮ
ಲ್ಲಪನೊಳ್ ಶೂರತೆಗಿಲ್ಲಿ ಮಲ್ಲಪನೊಳಾರ್ತೀವೊಳ್ಗುಣಕ್ಕಿಲ್ಲಿ ಮ
ಲ್ಲಪನೊಳ್ ಭವ್ಯತೆಗಿಲ್ಲಿ ಮಲ್ಲಪನೊಳಾಚಾರಕ್ರಮಕ್ಕಿಲ್ಲಿ ಮ
ಲ್ಲಪನೊಳ್ ನೋಟಿಪ್ಪೊಡೆ ಕಾಣಲಾಗದು ಸಮಾನಂ ಮಾನವಾನೀಕಮಂ ೬

ಪಂಡಿತಮಂಡಳಿಗಂ ಕವಿ
ಮಂಡಳಿಗಂ ತನ್ನ ಮನೆ ತವರ್ಮನೆಯೆನೆ ಕೆ
ಯ್ಕೊಂಡು ಪೊಗೞ್ದಿಪುದು ಭುವನಂ
ಕೌಂಡಿನ್ಯಕುಲಪ್ರದೀಪನಂ ಮಲ್ಲಪನಂ ೭

ನೃಪಸಭೆಯೊಳ್ ನುಡಿದಂ ಮ
ಲ್ಲಪನಂ ಸತ್ಯಾಕ್ಷರಕ್ಕೆ ಗೆಂಟೆದಱಂ ಮ
ಲ್ಲಪನ ಮತಮಂತು [ಟಾ] ದೇ
ಶಪೂರ್ವಕಂ ನುಡಿಯದಾತನುಂ ತದ್ವಿಧನೇ ೮

ಆಱುವೆಡೆಯೊಳ್ ಕಾಲತ್ರಯ
ದಿಱುವೆಡೆಯೊಳ್ ತನ್ನ ಶೌರ್ಯಮಂ ಬಲ್ಮೆಯುಮಂ
ಮೆಱೆದಂ ಮಲ್ಲಪನಲ್ಲದೆ
ಪೆಱನಾವನೊ ಶಾಸ್ತ್ರಶಸ್ತ್ರವಿದ್ಯಾಕುಶಲಂ ೯

ಪೊನ್ನಂ ನಯವಿದನಯಸಂ
ಪನ್ನಂ ಮಂದರಗಿರೀಂದ್ರದನ್ನಂ ನಿಜಧೈ
ರ್ಯೋನ್ನತಿಯೊಳ್ ಬಲ್ಮೆಯೊಳಜ
ನನ್ನಂ ಧರ್ಮಕ್ಕೆ ಧರ್ಮನಂದನನನ್ನಂ ೧೦

ಬಳದೇವ ವಾಸುದೇವರ
ನಿಱಿಪುದು ಗುಣದೊಳ್ಪು ರಾಮಲಕ್ಷ್ಮಣರಂ ಪೆಂ
ಪಿಱಿಪುದು ಭೀಮಾರ್ಜುನರುಮ
ನಿಱಿಪುದು ಮಲ್ಲಪನ ಪೊನ್ನಮಯ್ಯನ ಚರಿತಂ ೧೧

ಗುರು ಜಿನಚಂದ್ರಮುನೀಂದ್ರರ
ಪರೋಕ್ಷದೊಳ್ ತಂಮುತಿರ್ವರುಂ ಪೊನ್ನಿಗನಿಂ
ಬರೆಯಿಸಿದರ್ ಸಕಳೋರ್ವಿಗೆ
ಪರೆಯಿಸಿದರ್ ಸಲೆ ಪುರಾಣಚೂಡಾಮಣಿಯುಂ ೧೨

ಜಿನಭಕ್ತಂ ಮಲ್ಲಪನ
ಣ್ಣನ ಭಕ್ತಂ ಪೊನ್ನಮಯ್ಯನವರಿರ್ವರ ಮಾಂ
ತನದಳವನಳೆಯಲಜನಾ
ಜನೆನಿಸಿ ಕೌಂಡಿನ್ಯಗೋತ್ರಮಂಡನರಾದರ್ ೧೩

ಪರಮದ್ರೋಹರೊಳೊಂದಿ ತನ್ನೊಳಿಱಿಯಲ್ಕೋವಿಂವರಂ ಬರ್ಪುದುಂ
ಸೆರಗಂ ಪಾರದೆ ತಾಗಿ ತೈಲಪನೃಪಂ ಬಾೞ್ಕೆಂದು ಬಾಳ್ಗಿತ್ತು ಮ
ಚ್ಚರದಿಂ ಸಾರ್ಚಿದರಂ ಪಡಲ್ವಡಿಸಿ ಕಾವೇರೀಸರಿತ್ತೀರದೊಳ್
ಸುರಲೋಕಾತಿಥಿಯಾದ ಪೊನ್ನನೆ ವಲಂ ಗಂಡಂ ಪೆಱರ್ ಗಂಡರೇ ೧೪

ತಲೆ ಪಗೆವರ ಕೆಯ್ಯೊಳ್ ಸುರ
ಲಲನೆಯ ತೋಳೊಳಗೆ ಪತಿಯ ಭಂಡಾರದೊಳಂ
ನೆಲಸೆ ಸುಭಟರ್ಕಳೊಳ್ ಮೂ
ದಲೆ ನೆಗಲ್ದುದು ಪೊನ್ನನನ್ನನಾವನೊ ಮೊನೆಯೊಳ್ ೧೫

ಅವರೊಳಪ್ರತಿಮವಿಪ್ರಕುಲದೀಪನುಂ ಅಸಹಾಯಸಾಹಸೋತ್ಸಾಹ ಸಮುದಿತಸಂಪತ್ಸಂಪನ್ನನುಂ ಶರಣಾಗತವಜ್ರಪ್ರಾಕಾರನುಂ ಅಭಿಮಾನ ತುಂಗನುಂ ಅಹಿತಗಜಘಟಾಸಿಂಹನುಂ ಪತಿಹಿತಾಚಾರ್ಯನುಂ ಅಭಿನವಕೃಪಾ ಚಾರ್ಯನುಂ ಅವಲೋಕಿತಕಾಲತ್ರಯನುಂ ಆರಾಧಿತರತ್ನತ್ರಯನುಮಖಿಲ ಜಗತ್ತ್ರಯಪ್ರಸಿದ್ಧ ದಿಗಂಬರ ವೈರೋಚನ ಶ್ರೀ ಜಿನಚಂದ್ರದೇವಚರಣಾರವಿಂ ದಾರಾಧನಾವಿಧಿಕೃತಾಂತಃಕರಣನುಂ ಚಾಳುಕ್ಯಾಭರಣನುಂ ಶ್ರೀ ಮದಾಹವ ಮಲ್ಲದೇವಸಾಮ್ರಾಜ್ಯಲಕ್ಷ್ಮೀಪ್ರವರ್ಧಮಾನಹೇತುಭೂತನಿಜಾದೇಶಪರಂಪರಾ ಪ್ರಕಾಶಿತಪರಿಜ್ಞಾನಾತಿಶಯನುಮಪ್ರತಿಮಮಲ್ಲನುಮೆನಿಪ ಮಲ್ಲಪಂಗೆ

ವಿನಯಮತಿ ನಾಗಿಯಬ್ಬೆಗ
ಮನೂನಗುಣನೆನಿಪ ನಾಗಮಯ್ಯಂಗಂ ನಂ
ದನೆಯೆನಿಸಿದಪ್ಪಕಬ್ಬೆಯೆ
ಜಿನಪಾದಪಯೋಜಭೃಂಗಿ ಕುಲವಧುವಾದಳ್ ೧೬

ಅಂತಾ ಪುಣ್ಯಭಾಜನರಪ್ಪವರ್ಗೆ ಗುಂಡಮಯ್ಯನುಮೆಳಮಯ್ಯನುಂ ಪೊನ್ನಮಯ್ಯನುಮಾಹವಮಲ್ಲನುಂ ವಲ್ಲನುಮೆಂಬ ಪುರುಷರತ್ನಂಗಳುಂ ಅತ್ತಿಮಬ್ಬೆಯುಂ ಗುಂಡಮಬ್ಬೆಯುಂ ನಾಗಿಯಬ್ಬೆಯುಮೆಂಬ ಕನ್ನಾರತ್ನಂಗಳುಂ ಪುಟ್ಟಿ ಸಚಿವೋತ್ತಮನುಮುತ್ತಮಜಾತಿಯುಂ ಸಕಲಚಕ್ರವರ್ತಿಯ ಸಭಾಸಂವಾಸಚತುರನುಂ ಚತುರುಪಧಾವಿಶುದ್ಧನುಮೆನಿಸಿದ ಚಾಳುಕ್ಯ ಚಕ್ರವರ್ತಿಗೆ ಮಹಾಮಂತ್ರಿಯಾದ ದಲ್ಲಪಂಗೆ ಪುಟ್ಟಿ ನಿಜಮಹೀಪತಿಯ ಮಹೀಭಾಗಕ್ಕೆ ದಿಙ್ನಾಗನುಂ ನಾಗರಾಜನುಮೆನಿಸಿದ ನಾಗದೇವನೆಂಬ ಪುರುಷರತ್ನಕ್ಕೆ—ರತ್ನತ್ರಯಾಲಂಕೃತೆಯುಂ ದಾನಚಿಂತಾಮಣಿಯುಂ ಚಾರಿತ್ರಮೇರುವುಂ ಗುಣದಂಕಕಾರ್ತಿಯುಂ ಭವ್ಯಮನೋರಥಜನ್ಮಭೂಮಿಯುಂ ಕವಿವರಕಾಮಧೇನುವುಂ ಜಿನಧರ್ಮಪತಾಕೆಯುಂ ಮಹಾಸತೀಕುಲತಿಲಕೆಯುಮೆನಿಸಿದತ್ತಿಮಬ್ಬೆಯುಂ ಪತಿವ್ರತಾಗುಣಮಂಡನಮಂಡಿತೆಯೆನಿಸಿವ ಗುಂಡಮಬ್ಬೆಯುಮೆಂಬ ಕನ್ಯಾರತ್ನದ್ವಯಮಂ ಕೊಟ್ಟನಿಬರುಂ ಸುಖದಿನಿರೆ ಮಲ್ಲಪತನೂಜಂ ಗುಂಡನತಿಪ್ರಚಂಡನಾಗಿ

ನರನೆನಿಪ ಶೌರ್ಯದಿಂ ಗೋ
ನರನಂ ಪೆಣೆದಿಱಿದು ಗೆಲ್ದು ನಿಜವಿಜಯಯಶಂ
ಪರೆಯೆ ನೆಗೞ್ಚಿದನವನೀ
ಧರೆಯೊಳ್ ಮಲ್ಲಪನ ತನಯನೆಂಬುನ್ನತಿಯಂ ೧೭

ವೀರಾವತಾರನೆನಿಸಿದ
ವೀರಂ ಮಲ್ಲಪನ ತಮ್ಮನುಂ ನಂದನರುಂ
ವೀರರಳಿಯಂ ನೆಗೞ್ತೆಯ
ವೀರಾಗ್ರಣಿ ನಾಗದೇವನೊಜಟರ ಮಲ್ಲಂ ೧೮

ಎನೆ ನೆಗಲ್ದಾ ದಲ್ಲನ ನಂ
ದನಂಗಮಾಕಾಂತೆಯತ್ತಿಮಬ್ಬೆಗಮಾದಂ
ತನಯಂ ಪಡೆವಳ ತೈಲಂ
ವಿನಯಾಲಂಕಾರನೆನಿಸಿದಣ್ಣಿಗದೇವಂ ೧೯

ಅಂತು ನಿಜಕುಲತಿಲಕನೆನಿಸಿದ ನನ್ನಿ ನಾರಾಯಣಂ ತನಗೆ ತನಯನಾಗೆ ನಾಗದೇವನಭಿನವಕಾಮದೇವನುಂ ಹಯವತ್ಸರಾಜನುಂ ಸುಭಟಚೂಡಾಮಣಿ ಯುಮೊಱಟರಮಲ್ಲನುಮಾಹವಮಲ್ಲದೇವಪಾದಪಂಕಜಭ್ರಮರನುಮೆನಿಸಿ

ಕುಮರರ ಕಾಳೆಗದೊಳ್ ಪತಿ
ಯ ಮುಂದೆ ತಱಸಂದು ನಿಂದು ಕಡಿತಲೆಗೊಂಡ
ನ್ಯಮತಂಗಜಂಗಳಂ ವಿ
ಕ್ರಮಸಿಂಹಂ ದಲ್ಲನಂದನಂ ಪೊಣರ್ದಿಱದಂ ೨೦

ಜನಪತಿ ಮೆಚ್ಚಿ ತನ್ನಯ ಚಮೂಪತಿ ಮಾಡಿದನಾಪ್ತಮಂತ್ರಿ ದ
ಲ್ಲನ ಮಗನೀತನಂತಿರಿತರರ್ ಪತಿಭಕ್ತರುಮೀಗಳಾರುಮಿ
ಲ್ಲೆನಿಸಿದ ನಾಗದೇವನಣೆ ಮುಟ್ಟೆ ಧುರಂಧರನಾಗದೇವನೆಂ
ಬಿನಮಿಱದಿಕ್ಕಿದಂ ಸೆಣಸಿ ಪೊಕ್ಕರನಾಜಿಯೊಳಂಗರಕ್ಕಸಂ ೨೧

ಕಳಕುಳಮಾಗೆ ಪಂಚಲನ ಬಲ್ಪಡೆ ಪಂಚಲನಶ್ವಸಂಕುಲಂ
ಕಳಕುಳಮಾಗೆ ಪಂಚಲನ ದಂತಿಘಟಾವಳಿ ಯುದ್ಧರಂಗದೊಳ್
ಕಳಕುಳಮಾಗೆ ಗಾತ್ರಕರದಂತಿವಿಘಾತದೊಳುಗ್ರದಂತಿಮು
ಕ್ಕಳಕರುವಾಗರಂ ಪರಿದುದುದ್ಭಟನಿಂ ಸುಭಟತ್ರಿಣೇತ್ರನಿಂ ೨೨

ಬಲ್ಲಹನ ಬೆಸದೊಳೊಱಟರ
ಮಲ್ಲಂ ದಲ್ಲನ ತನೂಭವಂ ಕರಹಡದಿಂ
ಮಲ್ಲಮನಂ ಬೆನ್ನಟ್ಟಿದ
ಬಲ್ಲಾಳ್ತನದಿಂ ನಿಜೇಶನಂ ಮೆಚ್ಚಿಸಿದಂ ೨೩

ಅಂತನೇಕಸಂಗ್ರಾಮರಂಗಲಬ್ಧವಿಜಯಲಕ್ಷ್ಮೀಸಮಾಗಮದೊಳ ಮಾಹವಮಲ್ಲದೇವಪ್ರಸಾದಾಸಾದಿತಸೈನ್ಯಾಧಿಪತ್ಯಸಂಪತ್ಸಮಾಗಮದೊಳಮ ತ್ಯಂತಕಾಂತಕಾಂತಾದ್ವಯಸಮಾಗಮದೊಳಮುದ್ದಾಮಯೌವನಲಕ್ಷ್ಮೀಸಮಾ ಗಮದೊಳಂ ನೆಱೆದು ದೇವಾಂಗನಾಜನಸಮಾಗಮೋತ್ಸುಕಚಿತ್ತನಾಗಿ ನಾಗ ದೇವಂ ದೇವಲೋಕಕ್ಕೆ ಪೋಗೆ

ಎರಡೆ ವಲಂ ಕುಲವಧುಗಾ
ಚರಿಸಲ್ ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾ
ಚರಣಂ ಮೇಣ್ ಶುಭಚರಿತದೆ
ಮರಣಂ ಮೇಣಳಿಪಿನಿಂದೆ ಬಾೞ್ವುದು ದೊರೆಯೇ ೨೪

ಎಂದು ಪರಿಚ್ಛೇದಿಸಿ ತಮ್ಮಕ್ಕನತ್ತಿಮಬ್ಬೆಯಲ್ಲಿಗೆ ಗುಂಡಮಬ್ಬೆ ಬಂದು ಬದ್ಧಾಂಜಲಿಯಾಗಿ

ನಿನಗೆ ಮಗಂ ಜಗತ್ತಿಲಕನಿರ್ದಪನಕ್ಕ ಮಗಂ ಸಮರ್ಥನ
ಪ್ಪಿನಮಿರು ನಾಗದೇವನೊಡನಾಂ ಬೆಸಕೇಟ್ಟಿಪೆನೆಂದು ಬೇಡಿ ಕೊಂ
ಡಿನಿಯನನಪ್ಪಿಕೊಂಡುಚಿತಮಾಗೆ ಚಿತಾಗ್ನಿಯೊಳಣ್ಮಿ ಸತ್ತ ಸ
ಜ್ಜನಿಕೆಯ ಪೆಂಪು ಸಜ್ಜನಕೆ ಬಣ್ಣಿಸೆ ಸಂದುದು ಗುಂಡಮಬ್ಬೆಯಾ ೨೫

ಅಂತು ಗುಂಡೆಲ್ಲಂ ಪೊಗೞೆ ಗುಂಡಮಬ್ಬೆ ಮಹಾಸತೀಸಮುಚಿತಾ ಚಾರದೊಳಮಾಭರಣದೊಳ್ ನೆಗೞೆ

ನೆರೆಯದ ದಲ್ಲನಂದನನನಾದರದಿಂ ಬಯಸುತ್ತುಮಿ[ರ್ಪ ನ
ಮ್ಮಿರವು] ಕೃತಾರ್ಥಮಾದುದೊಡಸತ್ತು ಪತಿವ್ರತೆ ಗುಂಡಮಬ್ಬೆ ಸೌಂ
ದರಸುಭಟಂಗೆ ಸಗ್ಗದೊಳಮಿಲ್ಲಿ ಮನಃಪ್ರಿಯೆಯಾದಳೆಂದು ಮ
ಚ್ಚರಿಸುವರಿಂದ್ರಸೌಂದರಿಯರೇಂ ಸೊಬಗೋ ಸುಭಟತ್ರಿಣೇತ್ರನಾ ೨೬

ಅಂತಿರ್ವರುಂ ಗೀರ್ವಾಣಲೋಕದೊಳೆ ದಂಪತಿಗಳಾಗೆ

ಪತಿಯೊಡನೆನ್ನ ತಂಗೆ ದಹನಾರ್ಚಿಯೊಳೊಂದೆ ಮುಹೂರ್ತದೊಳ್ ನಿವೇ
ದಿತತನುವಾದಳಾಂ ಸಿರಿಯೆನಪ್ಪುದಱಿಂ ಸಿರಿದಪ್ಪ ದಾರುಣ
ವ್ರತದಹನಾರ್ಚಿಯಿಂದನುದಿನಂ ತನುವಂ ತನುಮಾಡುತಿರ್ಪೆನೆಂ
ಬತನುವಿರೋಧಮುಂ ತನುವಿರೋಧಮುಮೊಪ್ಪುಗುಮತ್ತಿಮಬ್ಬೆಯೊಳ್ ೨೭

ಪತಿವಿಗಮದೊಳಸಿಧಾರಾ
ವ್ರತಂಗಳಂ ತಾಳ್ದಿ ಧರ್ಮಮಂ ಮಾಡುವ ಸಂ
ತತಿಯಂ ಕಾಯುತೆ ಕಾಯ
ಸ್ಥಿತಿಯಾಯ್ತಾನತ್ತಿಮಬ್ಬೆ ಮಾಣ್ಬಳೆ ಮಾಣಳ್ ೨೮

ಒಡಲನುಪವಾಸದಿಂ ತ
ನ್ನೊಡಮೆಯನನವರತದಾನದಿಂ ತವಿಸಿ ಜಸಂ
ಬಡೆದಳ್ ನೂರ್ಮಡಿ ತೈಲನ
ಪಡೆದವಳ ತೈಲಪನ ಜನನಿಗೆಣೆ ಪೆಱರೊಳರೇ ೨೯

ದಶದಿಗ್ವಳಯದೊಳಮಳಿನ
ಯಶಮೆಸೆದಿನಮತ್ತಿಮಬ್ಬೆ ಜಿನಧರ್ಮದಯಾ
ವಶವರ್ತಿಯೆ ದಾನಂ ಪೂ
ಜೆ ಶೀಲಮುಪವಾಸಮೆಂಬಿವಂ ಪ್ರಕಟಿಸಿದಳ್ ೩೦

ಶ್ರಾವಕಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸಂದ ರೇವತೀ
ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ಶೀಲದೊಳ್
ದೇವಕಿ ತಾನೆ ದಾನಗುಣದಿಂದೆ ಸುಲೋಚನೆ ತಾನೆ ಎಂದು ಭ
ವ್ಯಾವಳಿ ಮೆಚ್ಚಿ ಬಣ್ಣಿಪುದು ಭವ್ಯಮನೋರಥಜನ್ಮಭೂಮಿಯುಂ ೩೧

ಬುಧಜನವಂದಿತೆ ಧರ್ಮ
ಪ್ರಧಾನೆ ದರ್ಶನವಿಶುದ್ಧೆ ದಾನಗುಣೈಕಾಂ
ಬುಧಿಯೆನಿಸಿದ ಕವಿವರಕಾ
ಮಧೇನುವೆಂದೆಂಬುದತ್ತಿಮಬ್ಬೆಯನೆ ಜಗಂ ೩೨

ಜಿನಪದಭಕ್ತೆ ಜಗತ್ತ್ರಯ
ಜನವಂದಿತೆ ಚಕ್ರವರ್ತಿಪೂಜಿತೆ ಜಿನಶಾ
ಸನರುಚಿ ಪಡೆವಳ ತೈಲನ
ಜನನಿಯೆ ತೀರ್ಥಕರಜನನಿಯೆನ್ನದರೊಳರೇ ೩೩

ಮನದೊಳ್ ತಾಳ್ದುವಳೀ ಸತಿ
ಜಿನನಂ ಜಿನಜನನಿ ಗರ್ಭದೊಳ್ ತಾಳ್ದುವಳಿಂ
ಬಿನಿತೆ ವಿಕಲ್ಪಂ ತೈಲನ
ಜನನಿಗೆ ಜಿನಜನನಿಗೇಂ ವಿಕಲ್ಪಮುಮುಂಟೇ ೩೪

ಆಸನ್ನಭವ್ಯೆಯುಂ ಜಿನ
ಶಾಸನದೀಪಿಕೆಯುಮೆನಿಸಿ ಮಣಿಕನಕಮಯೋ
ದ್ಭಾಸಿ ಜಿನಪ್ರತಿಮೆಗಳಂ
ಸಾಸಿರದಯ್ನೂಱನೞ್ತಿಯಿಂ ಮಾಡಿಸಿದಳ್ ೩೫

ಸ್ಫುರಿತೋದ್ಯನ್ಮಣಿಘಂಟೆಗಳ್ ಮಣಿವಿತಾನಶ್ರೇಣಿಗಳ್ ಸ್ವರ್ಣಭಾ
ಸುರ ದೀಪಂಗಳ ಮಾಲೆ ದಿವ್ಯವಸನಪ್ರಾರಬ್ಧ ಶುಂಭದ್ಧ್ವಜೋ
ತ್ಕರಮುದ್ಭಾಸಿತರತ್ನತೋರಣಗಣಂ ಮಾಡಿರ್ದುವೊಂದೊಂದು ಸಾ
ಸಿರದಯ್ನೂಱಱಿನೆಯತ್ತಿಮಬ್ಬೆಗೆಣೆಯಿಲ್ಲೀಕಾಲದೊಳ್ ದಾನಿಗಳ್ ೩೬

ಸಮಯಕ್ಕೆ ಪಂಚಶತವಧಿ
ಕಮಾಗೆ ಸಮೆಯಿಸಿ ಸಹಸ್ರಕೂಟಸಹಸ್ರಾ
ಸ್ರಮುಮಂ ಸಮೆಯಿಸಲಾರ್ಗಂ
ಸಮೆಯಿಸಿದಳ್ ಸಮನೆ ದಾನಚಿಂತಾಮಣಿಯೊಳ್ ೩೭

ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾ
ಣ್ಬುನ್ನೆಗಮುನ್ನಮಂ ಬಿಸುಟು ಪರ್ವತಮಂ ಪರಿದೇಱೆ ತಜ್ಜಿನಾ
ಸನ್ನದೊಳತ್ತಿಮಬ್ಬೆಗೆ ಪಥಶ್ರಮಮಾಱಲಕಾಲವೃಷ್ಟಿಯಾ
ಯ್ತೆನ್ನದೊ ದೇವಭಕ್ತೆಗದು ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್ ೩೮

ಗುಣಿಗಳುಮಂ ನೆಗೞ್ದೊಳ್ಪಿನ
ಕಣಿಗಳುಮಂ ಕಾಣಲಪ್ಪುದದಱಿಂದವಸ
ರ್ಪಿಣಿಯಲ್ತು ಕಾಲಮುತ್ಸ
ರ್ಪಿಣಿಯೆಂಬುದದಾಯ್ತು ದಾನಚಿಂತಾಮಣಿಯಿಂ ೩೯

ಈ ಮಹಿಗೆಲ್ಲಮುಗ್ಗಳದ ದಾನಿಯನಗ್ರಣಿಮಾಡಿ ದಾನಚಿಂ
ತಾಮಣಿಯಂ ನೆಗೞ್ತೆವಡೆದೊಪ್ಪುವೆ ಸಾಲ್ಗುಮದರ್ಕೆ ಮುನ್ನ ಚಿಂ
ತಾಮಣಿ ಕಾಮಧೇನು ಸುರಭೂರುಹಮೆಂಬಿವನೇಕೆ ಮಾಡಿದಂ
ತಾಮರಸೋದ್ಭವಂ ಜಡಜಜಂಗೆ ವಿವೇಕಮದೆಲ್ಲಿ ಬಂದುದೋ ೪೦

ಫಳಲತಿಕೆ ಕಲ್ಪಲತಿಕೆಯ
ನಿಳಿಸಿ ಸವತ್ಸಾಮರೇಂದ್ರಧೇನುವ ಗುಣಮಂ
ತಳೆದಿಳೆಯೊಳ್ ನೆಗೞ್ದುದು ಪಡೆ
ವಳ ತೈಲನ ಜನನಿಯತ್ತಿಮಬ್ಬೆಯ ದಾನಂ ೪೧

ಪದೆದೆೞೆದರ್ಥಿಜನಕ್ಕಿ
ತ್ತುದೆ ಧನಮೀಯದುದೆ ಕೆಟ್ಟುದೆಂದರ್ಥಮನೀ
ವುದಱಿಂ ತನ್ನಸ್ವಂ ಯ
ನ್ನದೀಯತೇ ಎನಿಪುವತ್ತಿಮಬ್ಬೆಯ ದಾನಂ ೪೨

ಕಲಿಯೆನೆ ನೆಗೞ್ದಳ್ ಕಸವರ
ಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್
ಮೊಲೆವೊತ್ತ ತೈಲಜನನಿಯ
ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್ ೪೩

ಅಸಿಲತೆಯೆಂದು ಬಣ್ಣಿಪುದು ಧರ್ಮವಿರೋಧಿಜನಕ್ಕೆ ಧರ್ಮದಿಂ
ದೆಸಪ ಜನಕ್ಕೆ ಕಲ್ಪಲತೆಯೆಂದಿಳೆ ಬಣ್ಣಿಪುದೆಂಬ ತನ್ನ ಪೆಂ
ಪೆಸೆಯೆ ಜಗಜ್ಜನಂ ಪೊಗೞೆ ಸಂದ ಮಹಾಸತಿಯಂ ತಗುಳ್ದು ಬ
ಣ್ಣಿಸುವುದು ಪುಣ್ಯಮಲ್ತೆ ಜಿನಧರ್ಮಪತಾಕೆಯನತ್ತಿಮಬ್ಬೆಯಂ ೪೪

ಶ್ರೀ ಜಿನಧರ್ಮವಿಭೂತಿವಿ
ರಾಜಿತೆಯಂ ಚಕ್ರವರ್ತಿಪೂಜಿತೆಯಂ ಭ
ವ್ಯಾಜಿರಕಲ್ಪಲತಾವಿ
ಭ್ರಾಜಿತೆಯಂ ಪೊಗಬ ದಾನಚಿಂತಾಮಣಿಯಂ ೪೫

ಉತ್ತಮಗೋತ್ರೋದ್ಭವೆ ಸ
ದ್ವೃತ್ತೆ ಮಹಾಸತಿ ವಿನೇಯಚೂಡಾಮಣಿ ತಾ
ನೆತ್ತುಱಂದರೆತ್ತ ಪಿಕ್ಕುವೊ
ಡತ್ತಿಯ ಪಣ್ಣತ್ತಿಮಬ್ಬೆಯಲ್ಲದರ ಗುಣಂ ೪೬

ಸತಿಯರೊಳಗ್ಗಳದವನೀ
ಸುತೆ ಸೀತೆ ಪುಲೋಮಸುತೆ ಶಚೀದೇವಿ ಕುಭೃ
ತ್ಸುತೆ ಗಂಗೆ ದಕ್ಷಸುತೆ ಭವ
ಸತಿಯರ್ ಸಮನಪ್ಪೊಡಕ್ಕೆ ಮಲ್ಲಪಸುತೆಯೊಳ್ ೪೭

ಅಂಗನೆಯರೊಳಗೆ ಶೀಲಗು
ಣಂಗಳನೊಳಕೊಂಡು ನೆಗಲ್ದ ರಾಮಾಂಗನೆ ಕಾ
ಮಾಂಗನೆ ಪಂಕೇರುಹನಾ
ಭಾಂಗನೆ ಸಮನಕ್ಕೆ ನಾಗದೇವಾಂಗನೆಯೊಳ್ ೪೮

ನಂಬುಗೆ ಜಿನಮತದಲ್ಲಿ ಮ
ನಂಬುಗೆ ದರ್ಶನವಿಶುದ್ಧಿಯೆನೆ ನೆಗಲ್ದ ಜಯಂ
ತಾಂಬಿಕೆ ಸಲೆ ನೆಗಲ್ದ ಜಿತಜಿ
ನಾಂಬಿಕೆ ಸಮನಪ್ಪೊಡಕ್ಕೆ ತೈಲಾಂಬಿಕೆಯೊಳ್ ೪೯

ಶೀಲಾಳಂಕೃತೆಯಂ ಗುಣ
ಮಾಲಾಳಂಕೃತೆಯನಾಮಹಾಸತಿಯಂ ಶ್ರೀ
ತೈಲಾಂಬಿಕೆಯಂ ಪೆಸರ್ಗೊಳೆ
ಬಾಲೆಯರಂ ಖಳಕಲಂಕಮೇಂ ಪೊರ್ದುಗುಮೇ ೫೦

ಅಳುರದು ಕೀರ್ತಿ ಮುಟ್ಟದು ವಿಷಾಹಿ ಮಹಾಸತಿಯಿರ್ದ ಮಂಡಲಂ
ಬೆಳೆವುದು ಬೇಡಿದಂತೆ ಮಟಿಕೊಳ್ವುದೆನಿಪ್ಪ ಜಸಕ್ಕೆ ನೋಂತ ಭೂ
ತಿಳಕಪವಿತ್ರೆಯಂ ಗುಣಪವಿತ್ರೆಯನಾಸತಿಯಂ ಮಹಾಸತೀ
ತಿಳಕೆಯನತ್ತಿಮಬ್ಬರಸಿಯಂ ಪೆಸರ್ಗೊಳ್ವುದು ಪುಣ್ಯಕಾರಣಂ ೫೧

ಬಿಳಿಯರಳೆಯಂತೆ ಗಂಗಾ
ಜಳದಂತೆಸೆವಜಿತಸೇನಮುನಿಪತಿಯ ಗುಣಾ
ವಳಿಯಂತೆ ನೆಗಟ್ದ ಕೊಪಣಾ
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ ೫೨

ಪುರುದೇವಾಜಿತದೇವರಿರ್ವರೆ ದಲಾದ್ಯೋಪಾದ್ಯತೀರ್ಥೇಶ್ವರರ್
ಭರತೇಶಂ ಸಗರೇಶನಿರ್ವರೆ ದಲಾದ್ಯೋಪಾದ್ಯ ಚಕ್ರೇಶ್ವರರ್
ವರದಾನೋತ್ತಮನಾದನಾದಿಯುಗದೊಳ್ ಶ್ರೇಯಾಂಸನೀಕಾಲದೊಳ್
ಪರಮಶ್ರಾವಕಿ ನೀನೆ ದಾನಿಯೆ ವಲಂ ಶ್ರೀ ದಾನಚಿಂತಾಮಣೀ ೫೩

ವ್ರತಮಂ ಪೇಟಿಕೊಳ್ವೆಡೆ ನೋಂತು ತಾಱಿದೊಡಲುಂ ಚಕ್ರೇಶನಾಜ್ಞಾಧಿಪಂ
ಸುತನಂ ಪೇಟಿಕೊಳ್ವೆಡೆ ಚಕ್ರವರ್ತಿಕಟಕಕ್ಕಾರಾಧ್ಯೆಯಾಗಿರ್ದೆಯಾ
ಯತಿಯಂ ಪೇಟಿಕೊಳ್ವೆಡೆ ಕೆಟ್ಟ ಕಾಲದೊಳಿದಂ ಕೊಂಡಾಡಿದೈ ಧರ್ಮದು
ನ್ನತಿಯಂ ಪೆರ್ಚಿಸುವಂದು ನೀನೆ ಪಿರಿಯೈ ಶ್ರೀ ದಾನಚಿಂತಾಮಣೀ ೫೪

ಪಿರಿಯಂ ಬೂತುಗನಾತನಿಂ ಮಮಳನಾತಂಗಂ ನೊಳಂಬಾಂತಕಂ
ಪಿರಿಯಂ ನೆಟ್ಟನೆ ದಾನಧರ್ಮದೆಡೆಯೊಳ್ ಚಾವುಂಡರಾಯಂ ಕರಂ
ಪಿರಿಯಂ ಶಂಕರಗಂಡನಲ್ತೆ ಪಿರಿಯಂ ತದ್ಧಾರಮಂ ಪೊತ್ತು ನಿ
ತ್ತರಿಸುತ್ತಿರ್ಪುದಱಿಂದೆ ನೀನೆ ಪಿರಿಯೈ ಶ್ರೀ ದಾನಚಿಂತಾಮಣೀ ೫೫

ನೆಗಟ್ದರ್ ದಾನದಿನೊರ್ವರೊರ್ವರಱಿವಂ ತಾಳ್ದಿರ್ದ ಸಮ್ಯಕ್ತ್ವದಿಂ
ನೆಗಟ್ದರ್ ಧರ್ಮದ ಪೆರ್ಮೆಯಿಂ ಕೆಲಕೆಲರ್ ಶೀಲವ್ರತಾಚಾರದಿಂ
ನೆಗಟ್ದೈ ನೀನೆ ಜಗಕ್ಕೆ ದಾನಗುಣದಿಂ ಸಮ್ಯಕ್ತ್ವದಿಂ ಧರ್ಮದಿಂ
ಮಿಗೆ ಶೀಲವ್ರತದಿಂ ಸದಾಚರಣದಿಂ ಶ್ರೀ ದಾನಚಿಂತಾಮಣೀ ೫೬

ದಯೆಯಂ ತಾಳ್ದಿದ ಜೈನಧರ್ಮರುಚಿಯಂ ಕೈಕೊಂಡು ಸಮ್ಯಕ್ತ್ವಶು
ದ್ಧಿಯನೀಕಾಲದೊಳಪ್ಪುಕೆಯ್ದು ಭುವನಕ್ಕಾಶ್ಚರ್ಯಮಪ್ಪಂತು ಕೀ
ರ್ತಿಯನಾವರ್ಜಿಸುತಿರ್ಪುದಾರಚರಿತಪ್ರಾರಂಭದಿಂ ಚಕ್ರವ
ರ್ತಿಯುಮಂ ಪೆರ್ಚಿಸಿದೊಳ್ಪು ನಿನ್ನೊಳೆಸೆಗುಂ ಶ್ರೀ ದಾನಚಿಂತಾಮಣೀ ೫೭

ಮಹಿಚಕ್ರಕ್ಕಿದು ಚೋದ್ಯಮಲ್ತೆನಿಸುವಂತಾರ್ತೀವುದಂ ಕಂಡು ಸ
ಸ್ಪೃಹರೆಲ್ಲಂ ಗೆಳೆಗೊಂಡು ಬಣ್ಣಿಸುವರಿನ್ನೇಚೋದ್ಯಮೀಗಳ್ ಜಗ
ನ್ನೃಹನೀಯತ್ವಮನೆಯ್ದೆ ತಾಳ್ದಿದ ಮಹಾಪ್ರಖ್ಯಾತಿಯಂ ಕೇಳ್ದು ನಿಃ
ಸ್ಪೃಹರುಂ ಬಣ್ಣಿಪರಲ್ತೆ ನಿನ್ನ ಗುಣಮಂ ಶ್ರೀ ದಾನಚಿಂತಾಮಣೀ ೫೮

ನಯಮಂ ತಾಳ್ದಿ ಪೊಗಲ್ಕೆವೆತ್ತು ಭುವನಕ್ಕಾರಾಧ್ಯೆಯಾದತ್ತಿಮ
ಬ್ಬೆಯ ಶೀಲೋನ್ನತಿಗತ್ತಿಮಬ್ಬೆಯ ಮಹಾದಾನೋತ್ಸವಕ್ಕತ್ತಿಮ
ಬ್ಬೆಯ ಧರ್ಮಸ್ಥಿತಿಗತ್ತಿಮಬ್ಬೆಯ ಜಿನೇಂದ್ರಾರಾಧನಕ್ಕತ್ತಿಮ
ಬ್ಬೆಯ ಭಕ್ತಿಕ್ರಮಕತ್ತಿಮಬ್ಬೆಯ ಗುಣಕ್ಕಾರುಂ ಸಮಂ ಪೋಲ್ವರೇ ೫೯

ಗುಣದೊಳ್ಪಿಂ ಸಂದ ತನ್ನನ್ವಯಕೆ ನೆಗಲ್ದಳಂಕಾರಮಂ ಮಾಳ್ಪ ಭೂಷಾ
ಮಣಿಯುಂ ಶ್ರೀಜೈನಧರ್ಮೋನ್ನತಿಯ ಮಹಿಮೆಯಂ ಭಕ್ತಿಯಿಂ
ಕಾವ ರಕ್ಷಾ
ಮಣಿಯುಂ ಭವ್ಯೋತ್ತಮಾಂಗಾಸ್ಪದದೊಳೆ ಗುಣದುದ್ದಾನಿಯಂ
ಮಾಳ್ಪ ಚೂಡಾ
ಮಣಿಯುಂ ಶ್ರೀದಾನಚಿಂತಾಮಣಿಯೆ ಪೆಜರೊಳಿಂತೀ
ಗುಣಶ್ರೇಣಿಯುಂಟೇ ೬೦

ಜಿನಪೂಜೋತ್ಸವಕೆಲ್ಲಿಯುಂ ಜಿನಕಥಾಳಾಪೋತ್ಸವಕ್ಕೆಲ್ಲಿಯುಂ
ಜಿನತೀರ್ಥೋತ್ಸವಕೆಲ್ಲಿಯುಂ ಜಿನಮುನಿವ್ರಾತೋತ್ಸವಕ್ಕೆಲ್ಲಿಯುಂ
ಜಿನಗೇಹೋತ್ಸವಕೆಲ್ಲಿಯುಂ ಜಿನಮಹಾದಾನೋತ್ಸವಕ್ಕೆಲ್ಲಿಯುಂ
ಧನಮಂ ಪತ್ತಿಸುತಿರ್ಪೆ ನೀನೆ ಪಿರಿಯೈ ಶ್ರೀ ದಾನಚಿಂತಾಮಣೀ ೬೧

ಅಲಸುತುಮೀವ ಚಿಂತಿಸುತುಮೀವ ಮೊಗಂಮುರಿದೀವ ಮುಟ್ಟೆ ಮೂ
ದಲಿಸುತುಮೀವ ಪೆರ್ಚನೊಸೆದೀವತಿಬೆಳ್ಳೊಗದಿಂದಮೀವ ಮ
ಮ್ಮಲಮಱುಗುತ್ತುಮೀವ ಕಡುಲೋಭಕದಾನಗುಣಂಗಳಂ ಪಳಂ
ಚಲೆದಪುದಾರ್ತು ಕೂರ್ತು ಪಿರಿದೀವ ಗುಣಂ ಗುಣದಂಕಕಾರ್ತಿಯಾ ೬೨

ಪಡೆದೆರೆದರ್ಥಿಗೀಯದೆ ಜಸಕ್ಕೆ ತಗುಳ್ಚದೆ ತಮ್ಮ ದಾನಧ
ರ್ಮದೊಳುಪಯೋಗವಾಗದುಪಭೋಗಿಸದರ್ಥಮನಾದಮಾನೆಗಂ
ಕುದುರೆಗವಾರ್ತು ವೆಚ್ಚಿಸದೆ ಪೂಜಿಸಿ ಪೂಜಿಸಿಯಾಳ್ದು ಪೂಟ್ಟಿ ಬ
ಯ್ತುದೆ ಪೆಱಗೆಂಬುದೀ ದೊರೆತು ದಾನಗುಣಂ ಗುಣದಂಕಕಾರ್ತಿಯಾ ೬೩

ಎನಿಸಿ ನೆಗಟ್ದತ್ತಿಮಬ್ಬೆಯ
ತನಯಂ ಪಡೆವಳ್ಳ ತೈಲನಣ್ಣಿಗದೇವಂ
ವಿನಯಾರ್ಣವನೂರ್ಜಿತಶೌ
ರ್ಯನಿಧಾನಂ ಚಕ್ರವರ್ತಿಸೈನ್ಯಾಧೀಶಂ ೬೪

ಪದಯಿದನೆನೆ ಪದುಳಿದನೆನೆ
ಪದಸ್ಥನೆನೆ ಸತ್ಯಶೌರ್ಯಶೌಚಾದಿಗುಣಾ
ಸ್ಪದನೆನೆ ನೆಗೞ್ದಹವಮ
ಲ್ಲದೇವನಂ ಮನದೆಗೊಂಡನಣ್ಣಿಗದೇವಂ ೬೫

ವಿನುತಾರ್ಥಿಗೆ ಗಡ ಮಾಣಿಕ
ಮೆನೆ ನಚ್ಚುವ ನಾಗದೇವನಗ್ರಸುತಂ ಮಾಂ
ತನದಿಂ ಮಕ್ಕಳ ಮಾಣಿಕ
ಮೆನಿಸಿವನಭಿಮಾನಿ ದಾನಿ ಪಡೆವಳತೈಲಂ ೬೬

ಆದಿರದ ಗಂಡನೆಂಬುದುದಿತೋದಿತನೆಂಬುದಗಣ್ಯಪುಣ್ಯನೆಂ
ಬುದು ಗುಣವಂತನೆಂಬುದು ದಯಾಪರನೆಂಬುದು ಧರ್ಮಚಿತ್ತನೆಂ
ಬುದು ಶುಭವೃತ್ತನೆಂಬುದು ಮಹೋದಯನೆಂಬುದು ದೇವಭಕ್ತನೆಂ
ಬುದು ಪತಿಭಕ್ತನೆಂಬುದು ಜಗದ್ವಳಯಂ ಪಡೆವಳ್ಳತೈಲನಂ ೬೭

ದಿನಕರಸುತವಚನಂ ರಾ
ಮನೆನಿಸು ಕಂಡರಿಸಿ ಕಲ್ಲೊಳಿಟ್ಟಕ್ಕರಮೆಂ
ಬಿನೆಗಮೆಸೆದಪುದು ನೃಪಶಾ
ಸನಮೆನಿಸುವ ನನ್ನಿ ನನ್ನಿನಾರಾಯಣನಾ ೬೮

ಜಗತೀಚಕ್ರಮನಾಳ್ಗೆ ತೈಲನೃಪನೇಕಚ್ಛತ್ರದಿಂ ಚಕ್ರವ
ರ್ತಿಗೆ ದಿಗ್ಭಿತ್ತಿವರಂ ನಿಮಿರ್ಗೆ ನೆಲನಾಸ್ವಾದಿಪ್ಪ ಸಾರೋದಯಂ
ಮಿಗೆ ತೈಲಂ ನೆಗಟ್ದತ್ತಿಮಬ್ಬೆಯ ಮಗಂ ಮತ್ಕಾವ್ಯಮಂ ಮೆಚ್ಚಿ ಕೇ
ಳ್ವ ಗುಣಂಗೊಳ್ವ ಜನಕ್ಕಮಕ್ಕೆ ವಿಭವಂ ಭದ್ರಂ ಶುಭಂ ಮಂಗಳಂ ೬೯

## ದಾನಚಿಂತಾಮಣಿ ಅತ್ತಿಮಬ್ಬೆ—ಪರಿಶಿಷ್ಟ ಒಂದು

(ಯಾರು ಬರೆದುದೋ ತಿಳಿಯದು)

ಶ್ರೀಮದಶೇಷಜೈನಸಮಯೈಕಶಿರೋಮಣಿ ಸರ್ವಜೀವರ
ಕ್ಷಾಮಣಿಯೆಂದು ಭವ್ಯತತಿ ಬಿಚ್ಚಟಿಸುತ್ತಿರೆ ಸಂದ ದಾನಚಿಂ
ತಾಮಣಿ ತನ್ನದೊಂದು ಪಿತೃಭಕ್ತತೆಯಂ ಮೆಱೆಯಲ್ ಪುರಾಣಚೂ
ಡಾಮಣಿಯಂ ನಿಮಿರ್ಚಿದಳಿಳಾಗ್ರದೊಳಿಂತು ಜಸಕ್ಕೆ ನೋಂತರಾರ್ ೭೦

ಎಸೆಯದೆ ಪೊಱ್ದು ಕೆಟ್ಟಪುದು ಶಾಂತಿಪುರಾಣಮದಂ ನೆಗಟ್ಚುವೆಂ
ವಸುಧೆಯೊಳೆನ್ನ ತಂದೆಯ ಪರೋಕ್ಷದೊಳೆಂದು ಸಹಸ್ರಪುಸ್ತಕ
ಪ್ರಸರಮನತ್ತಿಮಬ್ಬೆ ಪರಮಾದರದಿಂ ಬರೆಯಲ್ಕೆವೇಟ್ದು ಪೆಂ
ಪಸದಳಮದ್ವಿತೀಯಮಸಮಂ ಸಲೆ ಭಾವಿಸಲೆಯ್ದೆ ಬಣ್ಣಿಸಲ್ ೭೧

ಧರೆ ಪೊಗಟ್ಗುಂ ಮದೀಯಗುರುಭಕ್ತಿಯನಯ್ಯನುದಾತ್ತಕೀರ್ತಿವ
ಲ್ಲರಿ ನಿಮಿರ್ಗುಂ ಬುಧಾಳಿ ತಿಳಿಗುಂ ಜಿನಧರ್ಮಮನೀಗಳೀ ಮನೋ
ಹರತರ ಶಾಂತಿನಾಥಕಥೆಯಿಂ ಗಡಮೆಂದದನೀ ಜಗಂಗಳೊಳ್
ಪರೆಯಿಸಿದೊಂದು ದಾನಗುಣಮಚ್ಚರಿ ಭಾವಿಪೊಡತ್ತಿಮಬ್ಬೆಯಾ ೭೨

ತಂದೆಗೆ ಭಕ್ತನೆಂಬ ಗುಣನಾಮಮುದೆನ್ನಯ ತಂದೆಗೆನ್ನೊಳಿಂ
ತಂದೆಯ ಭಕ್ತೆಯೆಂಬ ಪೆಸರನ್ವಯಸಿದ್ಧಿಯಿನಕ್ಕುಮೆಲ್ಲರಿಂ

ದೆಂದೊಸೆದಂದು ಶಾಂತಿಕಥೆಯಂ ಭುವನಾಂತರದೊಳ್ ನಿಮಿರ್ಚಿದೊಂ
ದಂದಮನೊಂದೆನಾಲಗೆಯೊಳೇಪೊಗಳ್ಪಿಂ ನೆಗಳ್ದತ್ತಿಮಬ್ಬೆಯಾ ೭೩

ಪಡೆಮಾತೇನುದಯಾಚಲಾಸ್ತನಗಪೈವಾದ್ರೀಂದ್ರ ತತ್ಸೇತುವಾ
ಕಡೆಗಳ್ ರುಂದ್ರಫಣೀಂದ್ರಲೋಕಸುರಲೋಕಾಂಭೋಜಜಾತಾಂಡದಾ
ಕಡೆಗಳ್ ಶಾಂತಿಪುರಾಣಸತ್ಕೃತಿಗಡರ್ಪಪ್ಪನ್ನೆಗಂ ಪರ್ವಿ ದಾಂ
ಗುಡಿವಿಟ್ಟತ್ತು ಯಶೋಲತಾಪ್ರತತಿ ಚೆಲ್ವಿಂದೆತ್ತಮತ್ತ್ಯಬ್ಬೆಯಾ ೭೪

. . . . . . . . . . ಪ್ರತಾಪಿ ಮಗಳಾದಂದೆನ್ನ ಸತ್ಕೀರ್ತಿ ಮ
ದ್ಗುರುನಾಮಾಂಕಿತಕಾವ್ಯಮುಂ ನೆಗಳ್ದುದೆಂದಾನಂದಮುಂ ತಾಳ್ದುಗುಂ
ಪಿರಿದುಂ ಸಗ್ಗದ ಮಾತು ಕಟ್ಟಿದಿರದೀ ಶಾಂತೀಶಕಾವ್ಯಂ ಮನೋ
ಹರಮಾಗಲ್ ಪಡಿಚಂದಮುಂ ಪರೆಸಿದಳ್ ಭೂಲೋಕಕತ್ತ್ಯಬ್ಬೆಯುಂ ೭೫

ಜಿನಧರ್ಮಾವೃತಿ ಶಾಂತಿನಾಥಕಥೆಯಂ ಕೈವಾರದಿಂದತ್ತಿಮ
ಬ್ಬೆ ನಿಮಿರ್ಚುತ್ತಿರಲಿತ್ತಮತ್ತಲಮರರ್ ಕೈಕೊಂಡುಪೊಯ್ದರ್ ದಿವ
ಕ್ಕನೆ ಸತ್ಕೀರ್ತಿಗೆ ನೋಂತೆವೆಂದು ದಿವದೊಳ್ ಪುನ್ನಯ್ಯನುಂ ಮಲ್ಲಪ
ಯ್ಯನುಮಂತಾಜಿನಚಂದ್ರನುಂ ಪಿರಿದುಮೊಂದುತ್ಸಾಹಮುಂ ತಾಳ್ದಿದರ್ ೭೬

## ದಾನಚಿಂತಾಮಣಿ ಅತ್ತಿಮಬ್ಬೆ—ಪರಿಶಿಷ್ಟ ಎರಡು

(ಯಾರು ಬರೆದುದೋ ತಿಳಿಯದು)

ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳುಕ್ಯಾಭರಣ ಶ್ರೀಮದಾಹವಮಲ್ಲದೇವರ ರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ಧಮಾನ ಮಾಚಂದ್ರಾರ್ಕತಾರಂಬರಂ ಸಲುತ್ತಮಿರೆ ತತ್ಪಾದಪದ್ಮೋಪಜೀವಿಯುಮಖಿಳ ರಾಜ್ಯಭರನಿರೂಪಿತಮಹಾಮಂತ್ರಾಕ್ಷಪಟಳಾಧಿಪತಿಯುಮೆನಿಸಿ

ಮಲ್ಲಾಮಲ್ಲಿಯೊಳಾಂತರಿ
ಮಲ್ಲರನಾಹವದೊಳೊತ್ತಿ ಗೋಳ್ಮುರಿಗೊಳ್ವೀ
ಬಲ್ಲಾಳ್ತನದಿಂದಾಹವ
ಮಲ್ಲನ ಭುಜಾದಂಡಮೆನಿಸಿ ಧಲ್ಲಂ ನೆಗಳ್ದಂ ೭೭

ಧಲ್ಲಂಗಂ ನೆಗಲ್ದಾಹವ
ಮಲ್ಲಂಗಂ ಭೇದಮುಂಟೆ ವಿಭವದೊಳದನೇ
ನೆಲ್ಲರುಮಱಿಯರ್ ಧರಣೀ
ವಲ್ಲಭಸಿಂಹಾಸನೈಕಭೇದಮೆ ಭೇದ[ಂ] ೭೮

ಅಂತು ಮಂಡಳಸಿದ್ಧಿಯುಂ ವಿವೇಕಬೃಹಸ್ಪತಿಯುಮೆನಿಸಿ ನೆಗಲ್ದ ಧಲ್ಲನ ಪಿರಿಯ ಮಗಂ

ಧಾಳಿಯೊಳಂಧ್ರನಂ ಪಿಡಿದಪೆಂ ಮಗಧೇಶನನಿಕ್ಕಿ ಮೆಟ್ಟಪೆಂ
ಲಾಟನ ಗಂಟಲಂ ಮುರಿದಪೆಂ ಖಸನಂ ಪುಡಿಯೊಳ್ಪೊರಳ್ಚಿಪೆಂ
ಕೋಳದೊಳಿಕ್ಕಿಪೆಂ ಮಲೆವ ಪಾಂಡ್ಯನನಾಹವಮಲ್ಲದೇವನಿಂ
ಪೇಱೆನುತಿರ್ಪನೀದೊರೆತು ಶೌರ್ಯಗುಣೋನ್ನತಿ ನಾಗದೇವನಾ ೭೯

ಆ ಮಹೀದೇವಕುಳಗಗನಗಭಸ್ತಿಮಾಳಿಗೆ ಮಹಾಸತೀರತ್ನಂ ಕುಳಪತ್ನಿಯಾಗಿ ಗುಣದಂಕಕಾರ್ತಿಯುಂ ಕವಿವರಕಾಮಧೇನುವುಂ ಕಟಕಪವಿತ್ರೆಯುಂ ಜಿನಧರ್ಮಪತಾಕೆಯುಮೆನಿಸಿದ ದಾನಚಿಂತಾಮಣಿಯ ಮಹಾಪ್ರಭಾವಮೇ ದೊರೆತೆನೆ

ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾಣ್ಬನ್ನೆಗ
ಮನ್ನಮಂ ತೊಱೆದು ಪರ್ವತಮಂ ಮುದದೇಱೆ ತಜ್ಜಿನಾ
ಸನ್ನದೊಳತ್ತಿಯಬ್ಬೆಗೆ ಪಥಶ್ರಮಮಾದೊಡಕಾಳವೃಷ್ಟಿಯಾ
ಯ್ತಿನ್ನವು ದೇವಭಕ್ತಿಗದು ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್ ೮೦

ನರಪನ ಬೆಸದಿಂ ಜಿನನಂ
ಶಿರದೊಳ್ ಸಲೆ ತಾಳ್ದಿ ದಾನಚಿಂತಾಮಣಿ ನಿ
ರ್ಭರ ಗೋದಾವರಿಯಂ ಪುಗೆ
ಪರಿಯುಡುಗಿದುದೆಂದೊಡೊಳ್ಪನದನೇವೇೞ್ವೆಂ ೮೧

ಮವವತ್ಸರಿ ಸೆಜ಼ೆಯುಂ ಪಜ಼
ದೊನವಿವ ಮುಳಿಸಿಂವೆ ಘೋರೆನೆಯ್ತುಂದೊಡವ
ರ್ಕದಿರದಿರೆ ಭಕ್ತಿಯಿಂವದು
ಪದಯುಗಕೆಜಗಿಮುದು ದಾನಚಿಂತಾಮಣಿಯಾ ೮೨

ಮುದದರ್ಚಿಪ ಜಿನಬಿಂಬಂ
ನದಿಯೊಳ್ ಕಯ್ವಿರ್ದುಕಿ ಬಿಟ್ಟೊಡಮು ಬರ್ಸಿನವು
ಣ್ಬುದನು ಬೀದಿರಲೆಂಟುದಿನ
ಕ್ಕಮು ಬಂಮುಮು ಕಯ್ಗೆ ದಾನಚಿಂತಾಮಣಿಯಾ ೮೩

ಪ್ರಳಯಾಗ್ನಿಯಂತೆ ಕಟಕಮು
ನೊಳಕೊಂಡಳುರ್ವಗ್ನಿ ದಾನಚಿಂತಾಮಣಿ ನಿ
ರ್ಮಳಜಿನಗಂಧೋದಕಮಂ
ತಳಿಯಲ್ಕುಪಶಮಿಸಿತೆಂದೊಡೇವಣ್ಣಿಸುವೆಂ ೮೪

ಒಡನೇಜ಼ ಸವತಿ ನೂಂಕ
ಲ್ಕೊಡರಿಸೆ ತೊಜ಼ೆಯೊಳಗೆ ಪಜ಼ುಗಲತ್ತಿತ್ತಲಣಿಂ
ಮಿಡುಕದೆ ತಿರಿಯುತ್ತಿರೆ ಕಂ
ಡಡಿಗೆಜಗಿದಳತ್ತಿಯಬ್ಬೆ [ಗ] ತಿಭುಯುವದಿಂ ೮೫

ಜಿನಧರ್ಮಪತಾಕೆಗೆ ವಿಮ
ಳ ನರ್ಮದಾನವಿಯು [ಕು] ರುಳಪಾವೆಯು ಜಿನನಂ
ವಿನುತಂ ಕಾಣ್ಬೆನೆಗಂ ಕೂ
ಜಿನೆ ತೊಜ಼ಿಮುದು ಸಂಮುದಂತವಾಜನ್ಮಾಂತಂ ೮೬

ಜಿನಪದಪಂಕಜಭ್ರಮರನೆಂಬ ನೆಗರ್ತೆಯನಾಳ್ದ ಮಲ್ಲಪ
ಯ್ಯನ ನೆಗಳ್ದಪ್ಪಕಣ್ಣೆಯ ಮಗಳ್ ಪತಿವ್ರತ್ರಮನಪ್ಪ ಧಲ್ಲಪ
ಯ್ಯನ ಸೊಸೆ ನಾಗದೇವನ ಕುಳಾಂಗನೆ ತೈಲನ ತಾಯ್ ಜಸಕ್ಕೆ ಭಾ
ಜನಮೆನಿಪತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತುಮಿರ್ದಪಳ್ ೮೭

ಎಣೆ ಮರುದೇವಿ ಪಾಸಟಿ ಸುಷೇಣೆ ಸಮಂ ಶಿವದೇವಿ ಪಾಟಿ ಲ
ಕ್ಷ್ಮಣೆ ಸದೃಶಂ ಮಹಾವಿಜಯಸೇನೆ ಸಮಾನೆ ಸುಶೀಳೆ ಪೋಲ್ವೆ ರು
ಕ್ಮಿಣಿ ಸರಿ ಸತ್ಯಭಾವೆ ತೊಣೆ ಮಿಕ್ಕ ಸುಳೋಚನೆ ತತ್ಸ್ವರೂಪೆ ರೋ
ಹಿಣಿ ದೊರೆ ಸಂದರುಂಧತಿ ಪೆಜಜ್ ದೊರೆಯೇ ಗುಣದಂಕಕಾರ್ತಿಯೊಳ್ ೮೮

ಪರಮಶ್ರೀ ಜಿನನಾಥಗೇಹವಿಳಸಚ್ಛಂಡೋಹಸಂದೋಹಭಾ
ಸುರಜೈನಪ್ರತಿಮಾವಿಚಿತ್ರಮಣಿಘಂಟಾಮಾಳಿಕಾಸಂತ್ಯೈ ಸಾ
ಯಿರದಯ್ನೂಱುವು ಬೇಱವೇಱಿಸಿಪಿನಂ ನಿರ್ಮಾಪಣಂಗೆಯ್ದು ಭೂ
ಭರದೊಳ್ ಧರ್ಮಮನತ್ತಿಮಬ್ಬೆಯವೋಲಿಂತಾರುಜ್ವಳಂಮಾಡಿದರ್ ೮೯

ಆ ಪರಮೇಶ್ವರಿಗೆ ಜಗ
ದ್ವ್ಯಾಪಕಶುದ್ಧೇಂದುಕೀರ್ತಿ ಪಿರಿಯಮಗಂ ಲ
ಕ್ಷ್ಮೀಪತಿ ಸಮಗ್ರವಿಜಯ
ಶ್ರೀಪತಿಯೆನೆ ಧರೆಗೆ ನೆಗಲ್ದ ಪಡೆವಳ ತೈಲಂ ೯೦

ಇಂತು ನನ್ನಿನಾರಾಯಣಂ ಸಮ್ಯಕ್ತ್ವರತ್ನಾಕರಂ ಪತಿಮೆಚ್ಚೆಗಂಡ ನಾಳ್ದನ ಚಕ್ರಂ ಕರ್ಪೂರವರ್ಷಂ ಚತುರಚತುರಾನನಂ ಗುಣಮೇರುವಾಯಿ [ಧಾ] ಚಾರ್ಯನೆಂಬ ನಾಮಮಾಳೆ ದಿಗ್ವಧೂಧಮ್ಮಿಲ್ಲಮಾಳೆಯೆನಿಸಿ ಶ್ರೀಮತ್ಪಡೆವಳ್ಳ ತೈಲಪಯ್ಯಂ ಮಾಸವಾಡಿ ನೂಜನಾಲ್ವತ್ತುಮಂ ಬೀಳವೃತ್ತಿಯಿನಾಳುತ್ತಮಿರೆ

ಇಂತೆನಿಸಿರ್ದ [ತ] ತ್ಪುರವರಾಚಳಶೇಖರಮೆಂಬಿನಂ ದಿಶಾ
ದಂತಿಯ ದಂತಕಾಂತಿನಿಜಸೌಧವಿಶಾಳವಿಲೋಳಭಿತ್ತಿಯೊಳ್
ಸಂತತಮೊಪ್ಪುತಿರ್ಪನೆಗಮೂರ್ಜಿತಮಪ್ಪಿನಮತ್ತಿಯಬ್ಬೆ ಚೈ
ರಂತನ ಚೇಳಿನೀಚರಿತೆ ಮಾಡಿಸಿದಳ್ ಜಿನರಾಜಗೇಹಮಂ ೯೧

ಜಿತದೇವಾಧೀಶವಾಸಾಸ್ಪದಮಧರಿತನಾ [ಗೇ] ಂದ್ರಸೀಡೋನ್ನತಂ ರಂ
ಜಿತನಾನಾಕೂಟಶೋಭಾವಿಭವಮುದಿತತತ್ಕಾಮಿನೀಚಾರುಕೀರ್ತಿ
ಪ್ರತತಿಪ್ರೋತ್ಕಂದಮೆಂಬಂತೆಸೆದುದಸದಳಂ ಲೊಕ್ಕಿಗುಂಡೀ ಪುರೋರ್ವೀ
ಪತಿಚಂಚದ್ರತ್ನಕೋಟಿಸ್ಫುರಿತಮಕುಟಸಂಭಾಸಜೈನಾಧಿವಾಸಂ ೯೨

ಆ ಸತಿ ಮುಂ ಮಾಡಿಸಿದಾ
ಸಾಸಿರದಯ್ನೂಱು ಬಸದಿಗಿದು ಕಳಶಮೆನಲ್
ಭಾಸುರಮಾಯ್ತು ಜಿನೇಂದ್ರಾ
ವಾಸಂ ತೊಳಗುವ ಸುವರ್ಣಕಳಶೋನ್ನತಿಯಿಂ ೯೩

ಇಂತತಿಶಯಸರಳವಿಮಳಕೇವಳಾವಗಮತರುಣ . . ಕಿರಣಕಿರಣಶತ ವಿಭಾಸಮಾನಸಕಳವಸ್ತುವಿಸ್ತರಜಿನೇಂದ್ರವಚನ[ರ]ಚನಾವಚಿತಸಾ[ಕಾ]ರಮಾರ್ಗಪವನಪಥಚಂದ್ರಲೇಖೆಯು[ಮ]ಭ್ಯುದಯನೈಶ್ರೇಯಸ[ಸು]ಖಾವಾಪ್ತಿಹೇತುಭೂತಾಹಾರಾಭಯಭೈಷಜ್ಯಶಾಸ್ತ್ರಾಭಿಧಾನದಾನಪೂಜಾಶೀಳೋಪವಾಸಾದ್ಯಶೇಷಗುಣಗಣವಿಭಾಸುರತೆಯಿಂ ಗುಣದಂಕಕಾರ್ತಿಯುಂ ಸಕಳದಿವಿಜೇಂದ್ರವಿಷ್ಟರಪ್ರಕಂಪನಸಮರ್ಥಾನನ್ಯಸಾಧಾರಣನಿಜಪತಿವ್ರತಾಗುಣಜಿನೇಂದ್ರಪದಪಯೋಜಸಂಜಾತಭಕ್ತಿಭರಪ್ರಭಾವಾಪಾಸ್ತ ಸಮಸ್ತ ಕಟಕಭಯಂಕರನದೀಸ್ರೋತೋವೇಗವಿಳಸನದಿಂ ಕಟಕಪವಿತ್ರೆಯುಂ ಕವಿಕಥಕಗಾಯಕವಾದಕನಗ್ನಭಗ್ನನಟಭಟಮಾಗಧಾನಾಥಶಿಷ್ಟೇಷ್ಟಸಮಭಿಲಷಿತಾರ್ಥದಾನವಿನೋದೆ ಪರಿಬೃಂಹಿತಾಭಿನವಯಶಃಪಟಹಬಧಿರೀಕೃತಾಶಾಗಜೇಂದ್ರಸುಂದರತೆಯಿಂ ದಾನಚಿಂತಾಮಣಿಯುಂ ಮಂದರಮಹೀಧರಾಯಮಾನಾಭ್ರಂಕಷ [ಸಮ್ಯಗ್ದ]ರ್ಶನಪ್ರಭಾವವಿಜಿತರುಕ್ಮಿಣೀಪ್ರಭಾವೆಯುಮೆನಿಸುವತ್ತಿಮಬ್ಬರಸಿಯರ್ ಸಕಳಗೂರ್ಜರವಿಜಯಾನಂತರಂ ಶ್ರೀಮದಾಹವಮಲ್ಲದೇವಂಗೆಬಿನ್ನಪಂಗೆಯ್ದು ಚಕ್ರವರ್ತಿದತ್ತಿಪ್ರಖ್ಯಾತಮಪ್ಪ ಶಾಸನಮುಂ ಪೊನ್ನಕಳಶಂಬೆರಸು ಪಡೆದು. . . . . ಶ್ರೀಲೊಕ್ಕಿಗುಂಡಿಯೊಳ್ ಬಸದಿಯಂ ಮಾಡಿಸಿ[ದರ್.]

# ರನ್ನನ ಧರ್ಮಾಮೃತ

## ಕಾವ್ಯ ಧರ್ಮ

ಪದಿನಾಱಲ್ಲವಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವೊಂ
ದಿದ ಶೃಂಗಾರಮುದಲ್ಲವೊಂದೆ ರಸವೊಂಬತ್ತೆಯ್ದೊಡಂಬಟ್ಟುವೆಂ
ಬುದನೆಂಬನ್ನೆಗಮುಂಗನೋಚಿತರಸಾಲಂಕಾರಮಂ ತಾಳ್ದದೊ
ಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀ ಮುಖಾಂಭೋಜದೊಳ್ ೧

ಕವಿಮಾರ್ಗದೊಳೊಳಪೊಕ್ಕುಂ
ನವರಸಮಂ ತೆಱೆಯೆ ನುಡಿದನೆನಿಸಿದ ಕವಿ ಸ
ತ್ಕವಿಯೆನಿಕುಂ ಗೂಡಾರದ
ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೇ ೨

ಕಾರಕಪೂರಕವಸ್ತುವಿ
ಚಾರಕನಿಸ್ತಾರಕರ್ಕಳೋಳಿಯೆ ಸಭೆಗೊ
ಟ್ಟೋರಂತೆ ನಾಲ್ವರಿರ್ದು ವಿ
ಚಾರಂಬೇಳ್ಪಂತೆ ಪೇೞ್ದ ಕೃತಿಯುಂ ಕೃತಿಯೇ ೩

ದರವುರಮುಮಂಟಸುಂಟಿಯು
ಮರೆವೊರಕನುಮೆನಿಸಿ ತಱತಱಂ ನುಡಿದು ಸಭಾಂ
ತರದೊಳ್ ರಂಜಿಪುದೆ ರಸಾಂ
ತರಂಗಳಂ ಮುಟ್ಟೆನುಡಿದು ರಂಜಿಸವೇಡಾ ೪

ಸರಸತಿಯನಬಲೆಯಂ ಗೋ
ಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ
ಕ್ಕರಿಗನೆ ಪಾತಕನಾತನೆ
ಸರಸ್ವತೀದ್ರೋಹಸವನನಾರ್ ಮುಟ್ಟುವರೋ ೫

ಪೊಸದೇಸೆಯಂ ಬೆಡಂಗಂ
ರಸಘಟ್ಟಿಯನರ್ಘವೃಷ್ಟಿಯಂ ಬಗೆವರೊ ಭಾ
ವಿಸುವರೊ ಸಾರಣೆಯಂತಿರೆ
ಕಸಮಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್ ೬

ಕವಿಗಳೊಳಾ ಪುರಾಣಕವಿಪುಂಗವರೊಳ್ವಿದರೀಗಳಿಲ್ಲ ಸ
ತ್ಕವಿಗಳೆನಲ್ಕೆವೇಡವರ ಪೋದೊಡವಂದಿರ ಕಬ್ಬಮಿನ್ನು ಮಿ
ರ್ಪವು ಗುಣದೋಷಮಂ ನಿಕಷಮಿಟ್ಟು ಪರೀಕ್ಷಿಸಿ ನೋಡೆ ತಾಮೆ ಪೇ
ೞವೆ ಬುಧರಿರ್ದು ನೋೞ್ಪುದು ಪುರಾತನನೂತನಕಾವ್ಯರೇಖೆಯಂ ೭

ಗುಣಮನೆ ತೋರ್ಪಂ ದೋಷದ
ಗುಣಂಗಳನೆ ನೆಗೞ್ದಿ ತೋರ್ಪ ದುರ್ಜನನುಮದೇಂ
ಗುಣಗಣನೆಗೆ ತೋರ್ಪಂ ಕೃತಿ
ಗುಣದೋಷಪರೀಕ್ಷೆಗಾಜನಾಬ್ರಾಜಃಪರೋ ೮

ಪ್ರತಿಭೆ ನಿಸರ್ಗಮುಂಟು ಕಿಱಿದೋದುಗಳೊಳ್ಕಿಱಿದುಂಟು ಬಲ್ಮೆ ಶೀ
ಘ್ರತೆ ಕಿಱಿಮಂಡು ಪೇೞ್ವೊಡವರಿನ್ನಳವಲ್ಲದುದಂತಣಂ ಸರ
ಸ್ವತಿ ಪವಿತ್ರವೋಲ್ಕೆಲಬರೋದದೆ ಕೇಳದೆ ಕಲ್ಗಳಂತೆ ಗ
ರ್ವಿತರದಪಿರ್ಪರರ್ಥಕೃತಿಗೇಂ ಮತಿವಂತರೊ ಪುಣ್ಯವಂತರೋ ೯

ಗುಣಮಂ ಕಾಯದೆ ಕಾವರೇ ಪಣಮುಮಂ ಕಲ್ಪಾಂತರಸ್ಥಾಯಿಯೇ
ಗುಣವಂತಾಪಣಮನ್ಯರಿಂದರಸರಿಂ ದಾಯಾದರಿಂ ಕಳ್ಳರಿಂ
ಪಣಮೆಂತುಂ ಕಿಡಲಿರ್ಪುದುಳ್ಳ ಗುಣಕೇಂ ಕೇಡುಂಟೆ ಕಾವ್ಯಂಗಳೊಳ್
ಗುಣಮಂ ಬಯ್ತಿಡವೇಡ ನಿಲ್ವೊಡೆ ಗುಣಂ ನಿಲ್ಗುಂ ಪಣಂ ನಿಲ್ಗುಮೇ ೧೦

ಉದಧಿಯನೆಯ್ದೆ ದಿಗ್ಗಜಮನೆಯ್ದೆ ಕುಲಾದ್ರಿಯನೆಯ್ದೆ ನೀಳ್ದು ನಿ
ಲ್ವುದು ಜಸಮಿತ್ತರಿತ್ತ ಧನಮೇನಮ ನಿಲ್ವುದೆ ಮುನ್ನಮಿತ್ತರೆ
ಲ್ಲಿದರಿವರೀಯೆ ಪೆತ್ತವರುಮೆಲ್ಲಿದರಾಧನಮೆಲ್ಲಿತಿಂಪ್ರಜಾ
ಲದ ಸಿರಿಗೇಕೆ ಮೆಳ್ಪಡುವಿರೆಂದೊಱೆದಂ ಕವಿಕುಂಜರಾಂಕುಶಂ ೧೧

ಒಡಲೊಡಮೆಯೆಂಬಿವೆರಡುಂ
ಕೆಡಲಿರ್ಪುವು ಕೆಡದ ಕಸವರಂ ಜಸಮುದಱಿಂ
ಕೆಡುವೊಡಲೊಡಮೆಯುನೆಂದುಂ
ಕೆಡದೊಡಮೆಗೆ ಮಾಱುಗುಡುವುದಿಱಿವಬೆಡಂಗಾ ೧೨

ಗೆಲಲಾರ್ಪೊಡಿಱಿದು ಗೆಲ್ವುದು
ಗೆಲಲಾಱದೊಡಣ್ಮಿ ಸಾವುದಾಳ್ಗಿನಿತೆ ಗುಣಂ
ಗೆಲಲುಂ ಸಾಯಲುಮಾಱದೆ
ತೊಲಗಿದೊಡೆ ನೆಗೞ್ತೆ ತೋಱುಗುಮೆ ಸಿರಿಮೆಯ್ಯಂ ೧೩

ಶ್ರೀಯುತನೊಳುದಾರತೆ ವಾಕ್
ಶ್ರೀಯುತನೊಳಮತ್ಸರತ್ವಮಾಗದುದಾರಂ
ಶ್ರೀಯುತನಮತ್ಸರಂ ವಾಕ್
ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್ ೧೪

## ಪರಮಜಿನಧರ್ಮ

ಸಮನಿಪ ಧರ್ಮಕ್ಕವಿರು
ದ್ಧಮರ್ಥಮರ್ಥಕ್ಕೆ ಕಾಮಮವಿರುದ್ಧಮನು
ಕ್ರಮದೊಳೆ ಕಾಮಕ್ಕಂ ಕಡೆ
ಯ ಮೋಕ್ಷಮವಿರುದ್ಧಮೆನೆ ಚತುರ್ವರ್ಗಫಲಂ ೧೫

ತನಗಲ್ಲದೊಡಲ್ಗೊಡಮೆಗೆ
ಮನಮಿಟ್ಟಪವರ್ಗಮಾರ್ಗಮುಂ ಪೊರ್ದದೆ ತ
ನ್ನನೆ ತಾನೆ ನಂಬಿಸುವೊಡಾ
ತ್ರಸಂತು ಪೇೞಾತ್ಮವಂಚಕರ್ ಪೆಱರೊಳರೇ ೧೬

ಮುನಿದುಯ್ವ ಜವಂಗಂ ಮಾ
ಱೆನಲಣ್ಮುವರಿಲ್ಲ ಬಗೆಯೆ ನಿನಗಿನ್ನಮರ್ಮಂ
ಜಿನಧರ್ಮಮೊಂದೆ ಜೀವನೆ
ನೆನೆ ಗಡ ಲೋಕತ್ರಯಕ್ಕೆ ದಿನನುಂ ಜಿನನುಂ ೧೭

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ಬಗೆವೆಯಪ್ಪೊಡೆನ್ನುಕ್ತಿಗೊಡಂ
ಬಡು ಜೀವ ನಿನ್ನ ಕಾಲಂ
ಪಿಡಿವೆಂ ಧರ್ಮಮನೆ ಮಗುೞೆ ಬಲ್ಪಿಡಿವಿಡಿಯಾ ೧೮

ಪ್ರಿಯತಮನೆಯಾಗು ರತ್ನ
ತ್ರಯದೊಳೆ ನಿನ್ನಡಿಗೆ ತಡೆಯದೆಱಗಿಸು ಭುವನ
ತ್ರಯಮಂ ನೆಲಸುಗೆ ಕಾಲ
ತ್ರಯಮುಮನೊಡನಱಿವ ದಿವ್ಯಬೋಧಂ ನಿನ್ನೊಳ್ ೧೯

ಪರಮಜಿನಧರ್ಮಮಂ ತತ್
ಸ್ವರೂಪದಿಂ ನಂಬಲೊಲ್ಲದೀಸಂಸೃತಿಯೊಳ್
ತಿರಿದಪುವು ಜೀವಮದನಾ
ದರದಿಂ ನಂಬಿದೊಡೆ ತಿರಿವ ಜೇವಸಮುಂಟೇ ೨೦

ನಾರಕತಿರ್ಯಗ್ಗತಿ ಸಂ
ಸಾರಿಗೆ ಪಾಪೋಪಚಯದೆ ಸುರಗತಿ ಪುಣ್ಯ
ಪ್ರೇರಿತದೆ ನೃಗತಿ ಮಿಶ್ರದೆ
ಸಾರೆ ವಲಂ ಸುಗತಿ ಪುಣ್ಯಪಾಪಕ್ಷಯದಿಂ ೨೧

ದೊರೆಕೊಂಡಿರ್ದ ಶುಭಾಶುಭ
ಪರಿಣಾಮಮೆ ಪುಣ್ಯಪಾಪಕಾರಣಮದಱಿಂ
ಪರಿಣಾಮಶುದ್ಧಿಯಿಂದಾ
ಚರಿಪುದು ಪರಲೋಕಹಿತಮನಿದೆ ಜಿನತತ್ತ್ವಂ ೨೨

ಅಱಿವು ನೆಗೞ್ತೆಯೆಂಬುಭಯಕಾಂಡಮೆ ಮುಕ್ತಿಪಥಕ್ಕೆ ಹೇತುವೆಂ
ದಱಿಪುವರನ್ಯರಂತವರೊಳೇನೊ ಜಿನಾಗಮಮಂತುಟಲ್ತು ಮಿ
ಕ್ಕಱಿವಿನ ಮಿಕ್ಕ ನಂಬುಗೆಯ ಮಿಕ್ಕ ನೆಗೞ್ತೆಯ ಕೂಟದಿಂದಮಾ
ದಱಿವನಿತರ್ಕಮಾಮೆಱಗಿ ಪೊರ್ದುವಮಕ್ಕಪವರ್ಗಮಾರ್ಗಮಂ ೨೩

ಪಸರಿಸಿದ ಕುತೀರ್ಥಧ್ವಾಂತಮುಂ ತೂಳ್ದಿ ಭವ್ಯ
ಪ್ರಸರಕಮಲಬೋಧಾವಾಪ್ತಿಯುಂ ತಾಳ್ದಿ ಪೆಂಪಿಂ
ವಿಶದವಿಭವತೇಜಶ್ಚಕ್ರಮುರ್ಕಂಬೊಲುದ್ಯೋ
ತಿಸುಗೆ ಸಕಲಧಾತ್ರೀಚಕ್ರದೊಳ್ ಧರ್ಮಚಕ್ರಂ ೨೪

ಅಕ್ಕುಂ ಬೋಧಂ ಶ್ರುತದೊಳ
ವೊಕ್ಕುಂದಾಬೋಧದಿಂದೆ ಸುಗತಿಯನೆಯ್ದ
ಲ್ಕಕ್ಕುಮದಱಿಂದಮುಭಯಭ
ವಕ್ಕಂ ಶ್ರುತದಿಂದೆ ಹಿತಕರಂ ಪೆಱತುಂಟೇ ೨೫

ವಿಜಯಧ್ವಜಮುಂ ದುರಿತ
ಧ್ವಜವಿಧ್ವಂಸನದೊಳೆತ್ತಿ ನೀಮುಂ ಧರ್ಮ
ಧ್ವಜನೆನಿಸಿದಜಿತನಾಥನ
ಗಜಧ್ವಜಂ ಮಾಡುಗೆಮಗೆ ಕೀರ್ತಿಧ್ವಜಮಂ ೨೬

ಶ್ರೀ ವಿಮಳಧರ್ಮಚಕ್ರಮ
ನಾವಂ ಭೂಚಕ್ರದೊಳ್ ನೆಗೞ್ಚಿದನೆಮಗಾ
ದೇವನಜಿತಂ ಜಗತ್ತ್ರಯ
ಪಾವನನೊಸೆಗಸಮುಚರಿತನಪಗತದುರಿತಂ ೨೭

'ಶ್ರೀ ಕವಿರತ್ನ' ಎಂಬ ಕಾವ್ಯಮಾಲೆ ಮುಗಿಯಿತು.

---

## ಟಿಪ್ಪಣಿಗಳು

### ೧. ಕವಿಚಕ್ರವರ್ತಿ ರನ್ನ

೧. ರಾಜಶೇಖರ—ಚಂದ್ರಶೇಖರ, ಈಶ್ವರ. ಕವಿರಾಜಶೇಖರ—ಕವೀಶ್ವರ. ಚೂಡಾರತ್ನ—ತಲೆಯಲ್ಲಿ ಧರಿಸುವ ರತ್ನ, ಶ್ರೇಷ್ಠ.

೨. ಒಬ್ಬಾಣಿಸು — ಪದಗಳನ್ನು ಪೋಣಿಸು. ರವಣಿಸು—(ಓಲೆಗರಿಯ ಹಾಳೆಗಳನ್ನು) ಒಟ್ಟುಗೂಡಿಸು, ಕೃತಿ ರಚಿಸು. ಕಮ್ಮೈಸು—ಪರಿಮಳಿಸು, ಹೆಸರಾಗು.

೩. ಎಂಬಿನಂ —ಎನ್ನುವ ಮಟ್ಟಿಗೆ. ಮಸುಳಿಸು—ಕಾಂತಿಗುಂದುವಂತೆ ಮಾಡು. ಬಹುರತ್ನಾ ವಸುಂಧರಾ—ಬಹುರತ್ನಗಳನ್ನು ಉಳ್ಳವಳು ಈ ಭೂಮಿ.

೪. ಆರಾತೀಯ—ಹಿಂದಿನ ಕಾಲದ. ಮುನ್ನ—ಇದಕ್ಕೆ ಮೊದಲು. ಆರ್ತರ್ ಇಲ್ಲ—ಸಮರ್ಥರಾಗಲಿಲ್ಲ. ಸಾರಸ್ವತಂ—ಸರಸ್ವತಿಗೆ ಸಂಬಂಧಿಸಿದ, ರಸವತ್ತಾದ.

೫. ಕಾಳಸ—ಧೋರಣೆ(?) ಪೊಸೆಯಿಪ—ಹೊಂದಿಸುವ, ಜೋಡಿಸುವ. ಬಲ್ಮೆ—ಸಾಮರ್ಥ್ಯ. ಚತುರ್ಮುಖಂ—ಸೃಷ್ಟಿಕರ್ತ.

೭. ಇಲ್ಲಿಯ ಪೂರ್ವಾರ್ಧ ಪ್ರಶ್ನೆ, ಉತ್ತರಾರ್ಧ ಉತ್ತರ. ಶ್ರುತ—ಜೈನಧರ್ಮ. ರನ್ನನು ಶ್ರುತರಮಣೀಯನೆಂಬುದಕ್ಕೆ ಅವನ ಅಜಿತಪುರಾಣವೂ, ಅವನು ಕವಿತಾಚತುರನೆಂಬುದಕ್ಕೆ ಅವನ ಗದಾಯುದ್ಧವೂ ಸಾಕ್ಷಿ. ಅವನು ಚಾರಿತ್ರವೆಂಬ ಮಣಿವಿಭೂಷಣವನ್ನು ಹೊಂದಿದ ರತ್ನನಷ್ಟೇ ಅಲ್ಲ, ಚಾರಿತ್ರವೆಂಬ ರತ್ನದ ಸಮುದ್ರದಲ್ಲಿ ಹುಟ್ಟಿದ ರತ್ನ.

೮. ತನೂದರೀ—ಕೃಶವಾದ ಉದರವುಳ್ಳವಳು, ಸ್ತ್ರೀ. ಈ ಪದ್ಯದಲ್ಲಿ ರನ್ನನು ಕಾಂತಾಕಟಾಕ್ಷಕ್ಕೆ ಪಾತ್ರನಾಗಿದ್ದನು ಎಂದು ಕಾಣುವುದರ ಜೊತೆಗೆ ಪಂಪನಿಗೂ ಇಂಥದೇ ಕೀರ್ತಿ ಇದ್ದುದನ್ನು ಗಮನಿಸಬಹುದು:

ವನಿತಾಕಟಾಕ್ಷಕುವಲಯ
ವನಚಂದ್ರಂ ಯುವತಿಜಘನಕಾಂಚೀರತ್ನಂ

ಸ್ತನಭರವಿನಮ್ರಗಣಿಕಾ
ಸ್ತನತಟಹಾರಂ ಸರಸ್ವತೀಮಣಿಹಾರಂ (ಆದಿಪುರಾಣಂ.)

**೯.** ಫಣಾ—ಹೆಡೆ. ಎಂಟೆರ್ದೆ—ಬಹು ಹೆಚ್ಚಿನ ಧೈರ್ಯ.

**೧೦.** ಜೈನೇಂದ್ರ–ಪೂಜ್ಯಪಾದಸ್ವಾಮಿಗಳವರ ಸಂಸ್ಕೃತ ವ್ಯಾಕರಣ. ಉಭಯವ್ಯಾಕರಣ—ಸಂಸ್ಕೃತ ಮತ್ತು ಕನ್ನಡ ವ್ಯಾಕರಣ.

**೧೧.** ಕರಂ ಎಸೆದುವು—ಚೆನ್ನಾಗಿ ಮೆರೆದುವು. ರತ್ನತ್ರಯ ಪರಿಕಲ್ಪದೆ—ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಸಮ್ಯಗ್‌ಚಾರಿತ್ರ ಎಂಬ ಮೂರು ರತ್ನಗಳು ಇದ್ದಹಾಗೆ. ಭುವನತ್ರಯ—ಮೂರುಲೋಕ.

**೧೨.** ಚಕ್ರವರ್ತಿ ತೈಲಪ—ಕರ್ಣಾಟಕದ ಸಕಲಚಕ್ರವರ್ತಿಯಾದ ಚಾಳುಕ್ಯರ ಆಹವಮಲ್ಲ ತೈಲಪ. (ಕ್ರಿ. ಶ. ೯೭೩–೯೯೭.)

**೧೩.** ಇನಿಸು ಉದಿತೋದಿತನ್—ಸ್ವಲ್ಪ ಮೇಲೆ ಬಂದವನು. ಚಕ್ರಿ—ಚಕ್ರವರ್ತಿಯಾದ ತೈಲಪ.

**೧೪.** ಕೊಂಡಾಟದ—ತನ್ನ ಕವಿತ್ವವನ್ನು ಕೊಂಡಾಡುವ. ಮಂಡನ—ಆಭರಣ.

**೧೫.** ಮದನನವತಾರ—? ಕನಕದಂಡ—ಚಿನ್ನದ ಕೋಲು, ಮರ್ಯಾದೆಯ ಚಿಹ್ನೆ. ಉನ್ಮದೇಭ—ಮದದಾನೆ. ಉತ್ತುಂಗದ—ಶ್ರೇಷ್ಠವಾದ. ಭತ್ತಗಾವೆ—ಬತ್ತದ ಗ್ರಾಮ ಎಂಬ ಜಹಗೀರು (?)

**೧೬.** ದೊರೆಯಱಿವ ವಸ್ತುಪುರುಷರ್—ಯಾವ ವಸ್ತುವಿಗೆ ಯಾವ ವಸ್ತು ಸಮ ಎಂದು ಬಲ್ಲವರು. ಕಟಕ—ರಾಜಧಾನಿ. ಅನರ್ಘ—ಬೆಲೆ ಕಟ್ಟಲು ಆಗದ, ಅಮೂಲ್ಯ.

**೧೭.** ವಸುಧಾಧಿಪತಿ—ಭೂಪತಿ. ಕಟಕ—೧. ರಾಜಧಾನಿ; ೨. ಕೈಯ ಕಡಗ. ಕೇವಣ—ಕುಂದಣವಿಕ್ಕುವುದು. ಚಿನ್ನದ ಆಭರಣದಲ್ಲಿ ರತ್ನಗಳನ್ನು ಮೆಟ್ಟುವುದು. ರನ್ನನು ರಾಜಧಾನಿಗೆ ಬಂದು ಸೇರಿದ್ದು, ಚಿನ್ನದಿಂದಾದ ಕೈಕಡಗದಲ್ಲಿ ರತ್ನವನ್ನು ಮೆಟ್ಟಿಸಿದ ಹಾಗೆ ಆಯಿತು.

**೧೯.** ಕಂಠಿಕೆ—ಕೊರಳ ಹಾರ. ಶ್ವೇತ ಆತಪತ್ರಂ—ಬಿಳಿಯ ಕೊಡೆ. ಮಾದೇವಿ—ಪಟ್ಟದ ರಾಣಿ. ಕಳಿತ—ಪಕ್ವವಾದ ಪಾಂಡಿತ್ಯ. ಚಂಚಚ್ಚಮರೀಜ—ಬೀಸುವ ಚಾಮರ. ಮೆಯ್ವೆತ್ತುದು—ಪ್ರಕಟವಾಯಿತು.

೨೦. ಗುರುವಚ್ಚಳನ್—ಗುರುಗಳ ವಾತ್ಸಲ್ಯಕ್ಕೆ ಪಾತ್ರನಾದವನು. ಸರಸ್ವತೀ ರತ್ನಮಂಡನಂ—ಸರಸ್ವತಿಗೆ ರತ್ನದ (ಅಥವಾ ಕವಿರತ್ನನೆಂಬ) ಆಭರಣವಾದವನು.

೨೧. ಎಱೆದ—ಪ್ರದಾನಮಾಡಿದ, ಹುಯಿದ; ಆ ಕುಲದ ಹಿರಿಯರು ತನಗೆ ಕಲಿಸಿದ. ಬೆಸಸೆ—ಹೇಳಿ ಮಾಡಿಸಲು. ನೆಗಟ್ದ—ಕೆಲಸ ಮಾಡಿ ಹೆಸರಾದ.

೨೨. ಅಱಕೆಯ—ಪ್ರಸಿದ್ಧವಾದ. ಗಟ್ಟಗೆ—ಘಟಪ್ರಭಾ ಎಂಬ ಪೆರ್ದೊಱೆ—ಹಿರಿಯ ತೊರೆ. ಸುಖೋದ್ದೀಪನ—ಸುಖವನ್ನು ಕೆರಳಿಸುವ.

೨೩. ಮುದುವೊೞಲ್—ಮುದಿಯಾದ ಪೊೞಲ್, ಪುರಾತನವಾದ ಪಟ್ಟಣ. ಇದೇ ಈಗಿನ ಜಮಖಂಡಿ ಪಟ್ಟಣದಿಂದ ಸುಮಾರು ೧೨ ಮೈಲು ದಕ್ಷಿಣಕ್ಕೆ ಘಟಪ್ರಭಾ ನದಿಯ ಎಡಮಗ್ಗುಲಲ್ಲಿರುವ ಮುಧೋಳ. ಸುಪುತ್ರ—ಹುಟ್ಟಿದ ಮನೆಗೆ ಹೆಸರು ತಂದವನು.

೨೪. ಸಂದ—ಅನುರೂಪವಾಗಿ ಸೇರಿದ. ನೆಗಟ್ದ—ಹೆಸರಾದ. ವಣಿಕ್ಕುಲ. ಅರ್ಕಂ—ವ್ಯಾಪಾರಿಗಳ ವಂಶಕ್ಕೆ ಸೂರ್ಯನಂಥ. ಎಸಕಂ—ಮಾಡಿದ ಕೆಲಸ, ಕವಿತ್ವ.

೨೫. ರತ್ನಂಬರೆಗಂ—ರತ್ನನ ವರೆಗೂ, ಅವನಷ್ಟು ಮಟ್ಟಿಗೆ. ನೋಂತನ್ ಆವೊಂ—ವ್ರತಮಾಡಿ (ಇಂತಹ ಪುಣ್ಯವನ್ನು ಪಡೆದವನು) ಯಾವನು? ಚಾವುಂಡರಾಯ—ಗಂಗರ ಮಂತ್ರಿ, ಗೋಮಟೇಶ್ವರ ವಿಗ್ರಹವನ್ನು ಮಾಡಿಸಿದವನು, ರನ್ನನ ಪೋಷಕ. ಅಜಿತಸೇನಾಚಾರ್ಯರು—ಚಾವುಂಡರಾಯನ ಗುರುಗಳು, ರನ್ನನಿಗೂ ಗುರುಗಳು.

೨೬. ಇರ್ಪಿನಂ—ಇರುವ ಮಟ್ಟಿಗೆ. ಕುಲಾಂಗನೆ—ಮನೆಯಾಕೆ, ಗೃಹಿಣಿ. ಜಕ್ಕಿ—ಯಕ್ಷಿ ಎಂಬುದರ ತದ್ಭವ.

೨೭. ನೆಗಟ್ದ ಅವರಿರ್ವರ—ಪ್ರಸಿದ್ಧರಾದ (ತನ್ನ ಆಶ್ರಯದಾತರು) ಚಾವುಂಡರಾಯ ಮತ್ತು ದಾನಚಿಂತಾಮಣಿ ಅತ್ತಿಮಬ್ಬೆ ಅವರಿಬ್ಬರ. ಉದ್ಧಕೃತಿ—ಅತ್ಯುತ್ತಮವಾದ, ಮಾದರಿಯಾದ ಕೃತಿಗಳು, ತನ್ನ ಇಬ್ಬರು ಮಕ್ಕಳು.

## ೨. ಸಾಹಸಭೀಮವಿಜಯ

೧. ಗರ್ಭಕ್ಕೆಬರೆ—(ತೀರ್ಥಂಕರನು ತಾಯ) ಗರ್ಭಕ್ಕೆ (ಅವತರಿಸಿದಂತೆ) ಬರಲು. ಅರಿವಸ್ತುವಾಹನಚಯಂ—ಶತ್ರುಗಳ ವಸ್ತುವಾಹನಗಳ ಮೊತ್ತ. ಕಯ್ಗೆ ಎಯ್ದೆವಂದತ್ತು—ಕೈಗೆ ವಶವಾಯಿತು. ಕಯ್ವತ್ತಿ—ಕೈಯನ್ನು ಊರಿ. ದಿಶಾದಂತಿ—ದಿಗ್ಗಜಗಳು. ಸತ್ಯಾಶ್ರಯಂ—ಚಕ್ರವರ್ತಿಯಾದ ಆಹವಮಲ್ಲ ತೈಲಪನ ಮಗ.

೨. ಪೊರೆಯದ—ಸೇರಿಕೊಳ್ಳದ. ದೊರೆಯಾದುದು—ಅನುರೂಪವಾಯಿತು, ಹೋಲಿತು. ಅಕಲಂಕಚರಿತಂ—ದೋಷವಿಲ್ಲದ ನಡತೆ. ಸತ್ಯಚಕ್ರೇಶ್ವರ—ಚಕ್ರವರ್ತಿಯಾದ ಸತ್ಯಾಶ್ರಯ.

೩. ಸೊಡರೊಳ್—ದೀಪದಲ್ಲಿ (ದಿಂದ). ಪಲರ್—ಹಲವರು. ಪಜ್ಜಳಿಸುವವೋಲ್—ಪ್ರಜ್ವಲಿಸುವ ಹಾಗೆ. ತವದೆ ಇತ್ತು—ಕಡಮೆಯಾಗದೆ ಕೊಟ್ಟು. ಇಱಿವಬೆಡಂಗನ್—ಶತ್ರುಗಳನ್ನು ಇರಿಯುವುದರಲ್ಲಿ ಬೆಡಗುಳ್ಳವನು, ಸತ್ಯಾಶ್ರಯ.

೪. ಅನಿಲಜ—ವಾಯುವಿನ ಮಗನಾದ ಭೀಮ. ಈ ಪದ್ಯದಲ್ಲಿ ರನ್ನ ಹೇಳುವಂತೆಯೇ ಪಂಪನೂ ಹಿಂದೆ ಹೇಳಿದ್ದ, ತನ್ನ ವಿಕ್ರಮಾರ್ಜುನ ವಿಜಯದಲ್ಲಿ, ತನ್ನ ಅರಸನನ್ನು ಕುರಿತು :

. . . . . . . . . . . . . . . . . . ಈತನುದಾತ್ತಪೂರ್ವಭೂ
ಮಿಪರುಮನೊಳ್ಪಿನೊಳ್ ತಗುಳೆವಂದೊಡೆಯೀಕಥೆಯೊಳ್ ತಗುಳ್ಚಿ ಪೋ
ಲಿಪೊಡೆನಗಬ್ಬೆಯಾದುದು ಗುಣಾರ್ಣವಭೂಭುಜನಂ ಕಿರೀಟಿಯೊಳ್

೫. ಕೃತಿಗೆ ಈಶ್ವರ—ಕಾವ್ಯದ ನಾಯಕ. ಚಕ್ರವರ್ತಿ ಸಾಹಸಭೀಮಂ—ಚಕ್ರವರ್ತಿಯಾದ ಸತ್ಯಾಶ್ರಯ, ಸಾಹಸಿಯಾದ ಭೀಮನಿಗೆ ಸಮಾನನಾದವನು. ಏವಣ್ಣಿಪುದೋ—ಏನೆಂದು ವರ್ಣಿಸುವುದೋ! ಆದಿಪುರಾಣದಲ್ಲಿ ಪಂಪನೂ ಹೀಗೆಯೇ ಮಾತನಾಡಿದ್ದಾನೆ:

ಗುರುದೇವೇಂದ್ರಮುನೀಂದ್ರಸಿಂದ್ರನಮಿತಂ ದೇವಂ ಕಥಾನಾಯಕಂ
ಪುರುದೇವಂ ಕಥೆಯುಂ ತದಾದಿಪುರುಷಪ್ರಸ್ತುತ್ಯಜನ್ಮಾಳಿಬಂ
ಧುರಮೆಂದಂದೆ ಮದೀಯ ವಾಗ್ವಿಭವವಿನ್ಯಾಸಂ ಬಲಂಬೆತ್ತುದಿ
ನ್ನಿರು ಬಲ್ಲಿತ್ತಱ ಕೋಡು ಕೂರಿತದನಂತಿಂತುಂತೆನಲ್ಬರ್ಕುಮೇ

೬. ಬದ್ಧ—ದೃಢವಾದ. ವಿರೋಧ—ವೈರ. ಅಂಕದ—ಗುರುತಾದ, ಪ್ರಸಿದ್ಧಿಯ. ಜಯೋದ್ದಾಮನ್—ಬಹು ದೊಡ್ಡ ಜಯಪಡೆದವನು. ವಸ್ತುಯುದ್ಧಂ—ಯುದ್ಧವನ್ನೇ ಕಥಾವಸ್ತುವಾಗಿ ಉಳ್ಳದ್ದು(?)

೭. ಒಳಕೊಂಡತ್ತು ಎನೆ—ಒಳಗೆ ಕೊಂಡಿದೆ ಎನಿಸುವ ಹಾಗೆ. ಸಿಂಹಾವಲೋಕನಕ್ರಮದಿಂ—ಸಿಂಹ ಮುಂದೆ ಮುಂದೆ ಹೋಗುವಾಗ, ಅಲ್ಲಲ್ಲೆ ನಿಂತು, ಹಿಂದೆ ತಾನು ಬಂದ ದಾರಿಯನ್ನು ದೃಷ್ಟಿಸಿಕೊಳ್ಳುವ ಹಾಗೆ. ಅಱಿಪಿದಂ—ತಿಳಿಸಿದನು.

೮. ವನರುಹಭವನ್ ಎನಿಸಿದ—ತಾವರೆಯಲ್ಲಿ ಹುಟ್ಟಿದ ಬ್ರಹ್ಮ ಎನ್ನಿಸಿದ; ಕೃತಿರಚನೆಯಲ್ಲಿ ಸಾಮರ್ಥ್ಯವನ್ನು ಪಡೆದ (?) ಈ ದಂಡನಾಯಕ ಕೇಶಿ ಯಾರೋ ತಿಳಿಯದು.

೯. ಶಂತನುಸೂನು—ಶಂತನುವಿನ ಮಗ, ಭೀಷ್ಮ. ಚಾಪಾಗಮ—ಬಿಲ್ವಿದ್ಯೆ. ದಿನಯುಗ—ಎರಡು ದಿನ. ಪರಿಚ್ಛಿನ್ನ—ಎಲ್ಲ ಕಡೆಯೂ ಕತ್ತರಿಸಿಹೋದದ್ದು. ರೌದ್ರಾಹವಂ—ರುದ್ರವಾದ ಯುದ್ಧ. ಸಮೆದುದು—ಆಯಿತು.

೧೦. ರಸೆ—ಪಾತಾಳ. ತೊಟ್ಟನೆ—ತಟಕ್ಕನೆ. ಕೊಳೆ—ಭೀಮನನ್ನು ಹಿಡಿಯಲು. ಪೊಱಮಟ್ಟು—ಹೊರಗೆ ಬಂದು. ಎಲ್ಲಿದಂ—ಎಲ್ಲಿದ್ದಾನೆ? ಎಣ್ದೆಸೆ—ಎಂಟು ದಿಕ್ಕು. ಅದ್ಭುತ ನಟ ನಿಟಿಲ ಆಲೋಲ ಕೀಲಾಕ್ಷಿವೋಲ್—ಅದ್ಭುತನಾದ ನಟ (ರಾಜನ) ನಿಟಿಲ (ಹಣೆಯಲ್ಲಿ) ಆಲೋಲ (ತೊಳಸುತ್ತಿರುವ) ಕೀಲಾಕ್ಷಿವೊಲ್ (ಉರಿಗಣ್ಣಿನಂತೆ) ದಳ್ಳಿಸೆ—ಬೆಂಕಿಯ ನಾಲಿಗೆ ಚಾಚಲು. ಕೋಪಾರಕ್ತನೇತ್ರಂ—ಕೋಪದಿಂದ ಕೆಂಪಾದ ಕಣ್ಣುಳ್ಳವನು. ಧಾರ್ತರಾಷ್ಟ್ರಂ—ಧೃತರಾಷ್ಟ್ರನ ಮಗನಾದ ದುರ್ಯೋಧನ.

೧೧. ಪಂಕಜ—ತಾವರೆ. ಸುಹೃದ್‌ವದನ ಪಂಕಜ—ಸ್ನೇಹಿತರ ಮುಖಕಮಲಗಳು. ಮುಗಿವ ಅನ್ನಂ—ಮುಗಿಯುವಂತೆ. ನಿಜಕರಂಗಳನ್—(ಸೂರ್ಯ) ತನ್ನ ಕಿರಣಗಳನ್ನು. (ಸುಯೋಧನ) ತನ್ನ ಕೈಗಳನ್ನು. ಉಡುಗುತ್ತುಂ—ಮುಮುರಿಕೊಳ್ಳುತ್ತ. ಇರ್ಪ ಚಕ್ರಾಂಕಂ ಅಗಲ್ವಿನಂ—ಒಟ್ಟಿಗಿದ್ದ ಚಕ್ರವಾಕಗಳು ಬೇರೆಯಾಗಲು; (ದುರ್ಯೋಧನನಿಗೆ) ಅದುವರೆಗಿದ್ದ

ಚಕ್ರವರ್ತಿಯೆಂಬ ಹೆಸರು ಕಳೆದುಹೋಗಲು. ಅಂಬರ—(ಸೂರ್ಯನಿಗೆ) ಆಕಾಶ; (ಸುಯೋಧನನಿಗೆ) ವಸ್ತ್ರ. ಉರ್ವಿಗೆ—ಭೂಮಿಗೆ. ಅಂಧಕಾರಂ ಕವಿತರ್ಪಿನಂ—ಕತ್ತಲೆ ಮುಚ್ಚಲಾಗಿ. ಕುರುಕುಲಾರ್ಕ—ಕುರುಕುಲಕ್ಕೆ ಸೂರ್ಯನಾದ ಕೌರವ. ಅರ್ಕ—ಸೂರ್ಯ. ಅಸ್ತಂ ಎಯ್ದಿದರ್—ಮುಳುಗಿ ಹೋದರು.

೧೨. ಭುಜಮಂದರ—ಭುಜವೆಂಬ ಮಂದರಪರ್ವತ. ಕುರು ಭೂಭೃದ್ಬಲತೋಯಧಿಯೊಳ್—ಕುರುರಾಜನ ಸೈನ್ಯವೆಂಬ ಸಮುದ್ರದಲ್ಲಿ. ಶ್ರೀಯಂ ಪಡೆದು—ರಾಜ್ಯಲಕ್ಷ್ಮಿಯನ್ನು ಸಂಪಾದಿಸಿ. ಕಡೆದು—ಮಥನ ಮಾಡಿ. ಭುಜಬಲವಿಭಾಸಿ—ತೋಳಿನ ಬಲವನ್ನು ಮೆರೆಯಿಸಿದವನು. ಅಜೇಯ—ಸೋಲದವನು.

## ೩. ಅಜಿತ ತೀರ್ಥಕರ ಪುರಾಣತಿಲಕಂ

೧. ಪಂಪನು ಕ್ರಿ. ಶ. ೯೪೧ರಲ್ಲಿ ಆದಿಪುರಾಣವೆಂದು ಮೊದಲನೆಯ ತೀರ್ಥಂಕರನ ಕಥೆಯನ್ನು ಬರೆದನು. ಪೊನ್ನನ ಶಾಂತಿಪುರಾಣ ಹದಿನಾರ ನೆಯ ತೀರ್ಥಂಕರನ ಕಥೆ. ರನ್ನನ ಅಜಿತಪುರಾಣ ಎರಡನೆಯ ತೀರ್ಥಂಕರನ ಕಥೆ.

೨. ಉಪಮಾತೀತ—ಹೋಲಿಕೆಗೆ ಮೀರಿದ್ದು. ನೆಱಗುಮೆ—ಸಮರ್ಥವಾಗುತ್ತವೆಯೆ? ಕೈಲಾಗುತ್ತದೆಯೆ?

೩. ರತ್ನತ್ರಯಪವಿತ್ರ—ಸಮ್ಯಕ್ಕಾದ ದರ್ಶನ, ಜ್ಞಾನ, ಚಾರಿತ್ರ ಗಳಂತೆ ಪವಿತ್ರ. ನೆಗಳ್ದ—ಜೈನಪುರಾಣಗಳನ್ನು ಬರೆದು ಹೆಸರಾದ. ಜಿನಸಮಯದೀಪಕರ್—ಜಿನನ ಧರ್ಮವನ್ನು ಬೆಳಗುವವರು. ಪೆಱರ್ ಒಳರೇ—ಬೇರೆಯವರು ಇದ್ದಾರೆಯೇ?

೪. ಸುಭಗಕವಿ—ಒಳ್ಳೆಯ ಭಾಗ್ಯಶಾಲಿಯಾದ ಕವಿ. ಉಭಯ ಕವಿಚಕ್ರವರ್ತಿ—ಸಂಸ್ಕೃತ ಕವಿಗಳಲ್ಲೂ ಕನ್ನಡ ಕವಿಗಳಲ್ಲೂ ಶ್ರೇಷ್ಠ. ಅಭಿ ನವ ಕವಿಚಕ್ರವರ್ತಿ—ಅಜಿತಪುರಾಣವನ್ನು ಬರೆಯುವ ಕಾಲಕ್ಕೆ ರನ್ನನಿಗೆ ಆಗ ತಾನೆ ಹೊಸದಾಗಿ ಈ ಬಿರುದು ಬಂದಿರಬೇಕು. ದೊರೆ ಒಳರೇ—ಸಮಾನರು ಇದ್ದಾರೆಯೇ?

೫. ಕವಿತಾಗುಣಾರ್ಣವ — ಪಂಪನ ಒಂದು ಬಿರುದು. ಮಚ್ಚರ — ಮಾತ್ಸರ್ಯ. ಇರ್ವರೆ — ಪಂಪ ಮತ್ತು ರನ್ನ ಇಬ್ಬರೇ.

೬. ಪಂಪ ದ್ವಿಜವಂಶಧ್ವಜ, ಇವನ ಹಿರಿಯರು ವೈದಿಕ ಬ್ರಾಹ್ಮಣರಾಗಿದ್ದವರು. ರನ್ನ ವೈಶ್ಯಧ್ವಜ, ಇವನು ಹುಟ್ಟಿದ್ದು ಬಳೆಗಾರರ ಕುಲದಲ್ಲಿ.

೭. ರಟ್ಟರಾಜ್ಯ — ರಾಷ್ಟ್ರಕೂಟರ ರಾಜ್ಯ. ಪಂಪನು ಇದ್ದುದು ರಾಷ್ಟ್ರಕೂಟರಿಂದ ರಾಜ್ಯವನ್ನು ಇಸಿದುಕೊಂಡ ಚಾಳುಕ್ಯರ ಅರಿಕೇಸರಿಯ ಆಸ್ಥಾನದಲ್ಲಿ. ಪೊನ್ನ ಇದ್ದುದು ರಾಷ್ಟ್ರಕೂಟರ ಚಕ್ರವರ್ತಿಯಾದ ಕನ್ನರನ ಆಸ್ಥಾನದಲ್ಲಿ.

೮. ಜಿನತಿಲಕಚರಿತ — ಅಜಿತನ ಪುರಾಣ. ಜಿನೇಂದ್ರನುತಿಮತಿ, ಮಹಾಸತೀತಿಲಕ, ಪೆಂಪಿನ ಕಣಿ — ಇವು ಎಲ್ಲವೂ ಅತ್ತಿಮಬ್ಬೆಗೆ ವಿಶೇಷಣಗಳು. ಮುಂದೆ 'ಅತ್ತಿಮಬ್ಬೆ' ನೋಡಿ. ಕಣಿ — ಗಣಿ.

೯. ಅಱ್ತಿಯಿಂ — ಪ್ರೀತಿಗೋಸ್ಕರ. ಮುನ್ನಂ — ಇದಕ್ಕೆ ಮೊದಲು. ಪೊನ್ನಿಗ, ಮಲ್ಲಪ — ಪೊನ್ನನಿಂದ ಶಾಂತಿಪುರಾಣ ಹೇಳಿಸಿದವರು. ಮುಂದೆ 'ಅತ್ತಿಮಬ್ಬೆ' ಎಂಬಲ್ಲಿ ನೋಡಿ. ಪುರಾಣಚೂಡಾಮಣಿ — ಶಾಂತಿಪುರಾಣ. ಗುಣೋನ್ನತೆ — ಉನ್ನತವಾದ ಗುಣಗಳುಳ್ಳ ಅತ್ತಿಮಬ್ಬೆ. ಇದಂ — ಈ ಅಜಿತ ಪುರಾಣವನ್ನು.

೧೦. ಭ್ರಾಂತ್ ಏನ್ — ಸಂದೇಹವೇನು ಬಂತು? ಸಮಾನ ಮನೆ — ಸಮಾನವಾದದ್ದನ್ನೇ. ಕಲ್ಪಾಂತಸ್ಥಾಯಿ — ಕಲ್ಪದ ಕೊನೆಯ ವರೆಗೂ ನಿಲ್ಲುವ. ಅಱ್ತಿಯಿಂ — ಪ್ರೀತ್ಯರ್ಥವಾಗಿ.

೧೧. ಅಱ್ತಿಯೊಳ್ — ಪ್ರೀತಿಯಿಂದ. ಗುಣವ್ರಾತ — ಗುಣಗಳ ಗುಂಪು. ಪೆಸರ್ಗೊಂಡು — ಹೆಸರೆತ್ತಿಕೊಂಡು. ಭವ್ಯ — ಜೈನಧರ್ಮವನ್ನು ನಂಬುವವರು. ನೆಗೞ್ — ಉಂಟಾಗು. ಬಲ್ಮೆ — ಕವಿಯ ಸಾಮರ್ಥ್ಯ. ಬಲ್ಲರ್ ಗೆಡೆಗೊಂಡು — ತಿಳಿದಂಥವರು ಸ್ನೇಹಗೊಂಡು. ಮಚ್ಚಿ — ಮನಃ ಪೂರ್ವಕವಾಗಿ. ಜಿತಮನೋಜಾತ — ಮನ್ಮಥನನ್ನು ಜಯಿಸಿದ ಜಿನ.

೧೨. ಆಗಮಾಮೃತ — ಜೈನ ಆಗಮವೆಂಬ ಅಮೃತ. ಕಿಂ ಕೇನ ಸಂಗತಂ — ಯಾವುದು ಯಾವುದರೊಡನೆ ಕೂಡಿತು? ಸರಸ್ವತಿ ಕೊಟ್ಟ ವರವನ್ನು ಜಿನಕಥೆಗಾಗಿ ಧರ್ಮಕಥೆಗಾಗಿ ಸಮರ್ಪಿಸಬೇಕಲ್ಲದೆ ಲೌಕಿಕದಲ್ಲಿ

ಅದನ್ನು ವ್ಯರ್ಥಮಾಡಬಾರದು ಎನ್ನುತ್ತಾನೆ. ಹಾಗೆ ಅಧರ್ಮಕಥೆ ಹೇಳಿ ಪಾಪಕ್ಕೆ ಗುರಿಯಾಗಬಾರದು ಎನ್ನುತ್ತಾನೆ.

೧೩. ಸುರಲೋಕ ಅವತರ ಉತ್ಸವಂ—ತೀರ್ಥಂಕರನ ಜೀವ ದೇವಲೋಕದಿಂದ ತನ್ನ ತಾಯಿಗರ್ಭಕ್ಕೆ ಇಳಿದು ಬರುವ ಉತ್ಸವ. ಪರಿಕ್ಕೃತಂ ಜನ್ಮಾಭಿಷೇಕ ಉತ್ಸವಂ—ತೀರ್ಥಂಕರನು ಹುಟ್ಟಿದಾಗ ಇಂದ್ರಾದಿ ದೇವತೆಗಳು ಮೇರುಪರ್ವತದ ಮೇಲೆ ಜಿನಬಾಲಕನಿಗೆ ಸಂಭ್ರಮದಿಂದ ನಡಸುವ ಅಭಿಷೇಕದ ಉತ್ಸವ. ಪರಿನಿಷ್ಕ್ರಾಂತಿ ಮಹಾ ಉತ್ಸವಂ—ಗೃಹದಲ್ಲಿದ್ದ ತೀರ್ಥಂಕರನು ವಿರಕ್ತನಾಗಿ ಮನೆಯನ್ನು ತೊರೆದುಹೋಗುವಾಗ ಇಂದ್ರಾದಿಗಳು ಬಂದು ಆಚರಿಸುವ ಮಹಾ ಉತ್ಸವ. ಪ್ರಿಯಮುಲಂ ಕೈವಲ್ಯಬೋಧ ಉತ್ಸವಂ—ಪರಮ ಪರಿಶುದ್ಧವಾದ ಕೇವಲಜ್ಞಾನವನ್ನು ತಪಸ್ಸಿನಿಂದ ಸಾಧಿಸಿದಾಗ, ಜಿನನಿಗೆ ಇಂದ್ರಾದಿಗಳು ಮಾಡುವ ಉತ್ಸವ. ಪರಿನಿರ್ವಾಣ ಮಹಾ ಉತ್ಸವ—ಕಟ್ಟಕಡೆಗೆ, ಶ್ರೀ ಜಿನನ ದೇಹವು ಬಿದ್ದು ಭಸ್ಮವಾಗಿ, ಜಿನನ ಜೀವ ಸಂಪೂರ್ಣ ಮುಕ್ತವಾದಾಗ ಇಂದ್ರಾದಿಗಳು ನಡಸುವ ಉತ್ಸವ. ಇವು ಐದನ್ನೂ ಜಿನನ 'ಪಂಚ ಮಹಾಕಲ್ಯಾಣ'ಗಳು ಎಂದು ಕರೆಯುತ್ತಾರೆ. ಭವ್ಯಾಂಗ—ಜೈನರಿಗೆ ರುಚಿಸುವ ಆಗಮದ ಭಾಗಗಳು. ವರ್ಣಕಂಗಳ್—ವರ್ಣನಾವಿಶೇಷಗಳು.

೧೪. ಸಂದೆಯುಂ ಎನಿತು ಒಳವು—ಸಂದೇಹ ಎಷ್ಟು ಇವೆಯೋ. ಅನಿತುಂ—ಅಷ್ಟೂ. ಅಸಂದಿಗ್ಧಂ—ಸಂದೇಹವಿಲ್ಲದೆ ನಿಶ್ಚಿತ. ಒದವುಗುಂ—ಉಂಟಾಗುತ್ತದೆ. ರತ್ನನ ಪೇೞ್ದ—ರನ್ನನು ಹೇಳಿದ. ಕೇಳಲೊಡಂ—ಕೇಳಿದ ಕೂಡಲೆ.

೧೫. ಆಗಮವರ್ಣನಂ—ಜೈನ ಶಾಸ್ತ್ರಗಳಲ್ಲಿ ಬರುವ ಪಂಚಕಲ್ಯಾಣಗಳು, ಧರ್ಮತತ್ತ್ವಗಳು, ಬೇರೆಬೇರೆ ಲೋಕಗಳು, ಮುಂತಾದ ವರ್ಣನೆ. ಎನಿತು ಉಂಟು ಅನಿತುಮಂ—ಎಷ್ಟು ಉಂಟೋ ಅಷ್ಟನ್ನೂ. ಭವ್ಯಜನ—ಜೈನರು. ಒಡರಿಸಿದಪ್ಪುದು—ಉಂಟುಮಾಡುತ್ತದೆ.

೧೬. ಮೊಗಗ್ಗಿಯ್ತೇ—ಸುಲಭವಾಯಿತೇ? ಮೊಗ್ಗು ಎಂಬುದು ಮೊಬ್ಬು ಎಂಬುದರ ಇನ್ನೊಂದು ರೂಪ ಇರಬಹುದು. ಮೊಬ್ಬು ಎಂದರೆ ಬಾಗು, ನಮಸ್ಕರಿಸು. ಸಮುದ್ರವನ್ನು ಪ್ರವೇಶಿಸುವುದು ಸಣ್ಣವರಿಂದ ಸಾಧ್ಯ

ವಿಲ್ಲವೆಂದು ಭಾವ. ತಡಿವಡಿಯೊಳ್—ದಡದಡದಲ್ಲೇ. ರನ್ನನು ಜೈನ ಧರ್ಮವನ್ನು ಕೂಲಂಕಷವಾಗಿ ಬಲ್ಲವನು, ಎನ್ನುತ್ತದೆ ಈ ಪದ್ಯ.

೧೭. ಪೆಜವುಳಿ—ಬೇರೆ ಕಡೆಯೊಳಗೆ. ಒಳವು—ಇವೆ. ಆಗಮ ವೇದಿ—ಆಗಮವನ್ನು ಬಲ್ಲವನು. ಆದಿಪುರಾಣದಲ್ಲೂ ಶಾಂತಿಪುರಾಣದಲ್ಲೂ ಸ್ಪಷ್ಟವಾಗದಿರುವ ಜೈನ ಆಗಮಭಾಗಗಳನ್ನು ಇಲ್ಲಿ (ಕನ್ನಡಿಯೆ) ಸ್ಪಷ್ಟ ವಾಗುವಂತೆ ಮಾಡಿದ್ದಾನೆ.

೧೮. ಭಾಸುರ—ಕಾಂತಿಯುಳ್ಳ. ಘಟ್ಟಿತ—ತಾಗಿದಂಥ. ಅಂಘ್ರಿ ದ್ವಯ—ಎರಡು ಪಾದ. ಶಿಖರಸ್ಥಿತ—ತುದಿಯಲ್ಲಿ ಇರುವವನು. ಕಲ್ಪಾಂ ಘ್ರಿಪ--ಕಲ್ಪವೃಕ್ಷ.

೧೯. ದಿವ—ಸ್ವರ್ಗ. ವೈಶ್ರವಣ—ಕುಬೇರ. ಕುಬೇರನು ಕರೆ ಯುವ ಈ ಚಿನ್ನದ ಮಳೆಯ ವರ್ಣನೆ (ಅಜಿತಪುರಾಣ ೩ : ೫.)

೨೦. ಅನಿಮಿಷಸುಂದರಿ—ದೇವತಾ ಸ್ತ್ರೀ. ಅಜಿತಪುರಾಣದಲ್ಲಿ ಮೂರ ನೆಯ ಆಶ್ವಾಸದಲ್ಲಿ ಈ ಗರ್ಭಶೋಧನೆಯ ವರ್ಣನೆಯಿದೆ.

೨೧. ದಿವಿಜ — ದೇವತೆ. ಮಜ್ಜನವಳ್ದಿರ್ — ಸ್ನಾನಮಾಡಿಸು ವವರು. ದಿವಿಜನಗಂ—ಮೇರು. ದಧಿಘೃತಮುಗ್ಧಾರ್ಣವಷಂಡಕಾಂಡ-- ಮೊಸರು ತುಪ್ಪ ಹಾಲು ಈ ಸಮುದ್ರಗಳು ಒಟ್ಟಿಗೆ ಬೆರೆತು ಏಕಾಕಾರವಾಗಿ. ಅಘ ಬಲಾಹಕ ಪವನಾ—ಪಾಪವೆಂಬ ಮೋಘಗಳನ್ನು ತೂರುವ ಗಾಳಿಗೆ ಸಮಾನನಾದ ಜಿನ. ತೀರ್ಥಂಕರನಿಗೆ ಇಂದ್ರಾದಿಗಳು ಮಾಡಿದ ಈ ಅಭಿಷೇಕದ ವರ್ಣನೆ ಅಜಿತಪುರಾಣದ ನಾಲ್ಕನೆಯ ಆಶ್ವಾಸಪೂರ್ತಿಯಾಗಿ ಇದೆ. ಇದನ್ನು ಕುರಿತು ಕವಿ ಹೇಳುತ್ತಾನೆ:

> ಪ್ರತ್ನಕವಿಪ್ರವರರ್ ಮೇಣ್
> ನೂತ್ನಕವಿಪ್ರವರರಕ್ಕೆ ಜಿನನಭಿಷವಮಂ
> ಯತ್ನದೆ ಪೇೞ್ದೊಡಮೇಂ ಕವಿ
> ರತ್ನನ ಜನ್ಮಾಭಿಷೇಕಮಂ ಪೋಲ್ತಪುವೇ

೨೨. ಭರ--ಭಾರ. ಸುಯ್—ಉಸಿರು. ಅಱುಕೆಯ—ಪ್ರಸಿದ್ಧ ಪಾದ. ಈ ಕುಮಾರಚರಿತವನ್ನು ಕುರಿತು ನಾಲ್ಕನೆಯ ಆಶ್ವಾಸದಲ್ಲಿ ಹೀಗೆ ವರ್ಣನೆಯಿದೆ:

ಬಾಳನ ನಾಸಾಪುಟದೊಳ್
ಮೇಳಿಸಿ ದುಗ್ಧೋದಬಿಂದುಸಂದೋಹಂಗಳ್
ಲೀಳೆಯಿನಾಂತುಸಿರ್ದೊಡೆ ಕಡು
ಗಾಳಿಯು ತಱಗೆಲೆಗಳಂತೆ ಪಾಱಿದರಮರರ್

೨೩. ತರಳಚಿತ್ತರ್—ಚಂಚಲ ಮನಸ್ಸಿನವರು. ನೆಱೆದಪರೇ—ಸಮರ್ಥರಾಗುವರೇ? ಇದು ಅಜಿತಪುರಾಣದ ಆರನೆಯ ಆಶ್ವಾಸದಲ್ಲಿರುವ ಪರಿನಿಷ್ಕ್ರಮಣ ಕಲ್ಯಾಣದ ಕಥೆ.

೨೪. ಕಳಕಳಿಪುದು—ನೋಡಿ ನಗುತ್ತದೆ. ಸಮವಸರಣ—ಕೇವಲ ಜ್ಞಾನವನ್ನು ಪಡೆದ ಜಿನನಿಗೆ ಕುಬೇರನು ತಂದು ಒಪ್ಪಿಸುವ ದಿವ್ಯವಾದ ಮಂಟಪ. ಇದು ಜಿನನು ವಿಹರಿಸಿದ ಕಡೆಯಲ್ಲೆಲ್ಲ ತಾನೂ ಹೋಗುತ್ತಿರುತ್ತದೆ.

೨೫. ವನಬರ್ಹಿ—ಕಾಡಿನ ನವಿಲು. ತಣಿಪು—ತೃಪ್ತಿಪಡಿಸು. ದಿವ್ಯಧ್ವನಿ—ತೀರ್ಥಂಕರನ ವಾಣಿ. ವಿಷ್ಟಪ ಜನ—ಲೋಕದ ಜನ. ತ್ರಿವಿಷ್ಟಪ ಏಕಅಧಿಪತಿ—ಮೂರು ಲೋಕಗಳಿಗೆ ಒಬ್ಬನೇ ಆದ ಒಡೆಯ, ತೀರ್ಥಂಕರ.

೨೬. ಇಂ ಇರ್ದುದು ಪ್ರಾಕಟಕಲ್ಯಾಣಂ—ಮುಂದೆ ಪ್ರಕಟವಾಗ ಬೇಕಾದ ಪರಿನಿರ್ವಾಣಕಲ್ಯಾಣ ಇನ್ನೂ ಇದೆ.

೨೭. ಜಿನನಿಗೆ ಅಲಂಕಾರವಿಲ್ಲ, ಮಜ್ಜನವಿಲ್ಲ, ಅಂಬರವಿಲ್ಲ, ಕುಸುಮ ವಿಲೇಪನಗಳಿಲ್ಲ. ಅರುಹನ ಮೂರ್ತಿ 'ನಿರಾಭರಣಂ.'

೨೮. ದೊರೆ—ಸಮಾನರಾದವರು. ಪೆಱವು ಒಳವೇ—ಬೇರೆ ಹೋಲಿಕೆಗಳು ಇವೆಯೇ?

೨೯. ವಿನಯದಾನಚಿಂತಾಮಣಿಚೂಡಾಮಣಿಮರೀಚಿರಂಜಿತಚರಣಾ—ಬಾಗಿದ ಅತ್ತಿಮಬ್ಬೆಯ ತಲೆಯೊಡವೆಯ ಮಣಿಗಳ ಕಿರಣಗಳಿಂದ ಕಾಂತಿಗೊಂಡ ಕಾಲುಗಳುಳ್ಳ ಜಿನನೇ.

೩೦. ವಸ್ತುಸ್ತವ—ಜಿನನ ಕಥೆಯ ವರ್ಣನೆ. ಲೋಕದ ಭವ್ಯರು ಜಿನನ ಕಥೆಯನ್ನು, ರೂಪನ್ನು, ಗುಣವನ್ನು ಕುರಿತು ಸ್ತೋತ್ರಮಾಡಿದರೆ ಮಾತ್ರ ಅವರು ಕಂಠ ಪಡೆದದ್ದು ಸಾರ್ಥಕ.

೩೧. ನಿಜ ಆಮ್ನಾಯದ–ತನ್ನ ವಂಶಕ್ಕೆ ನಡೆದು ಬಂದ. ಮಹಿಜಂ ಸಪ್ತಚ್ಛದಂ—ಈ ತೀರ್ಥಂಕರನು ಕೇವಲಜ್ಞಾನ ಪಡೆದದ್ದು ಸಪ್ತಪರ್ಣವೆಂಬ

ಮರದ ಅಡಿ. ದಂತಿ ಲಾಂಛನಂ—ಪ್ರತಿಜಿನನಿಗೂ ಒಂದು ಚಿಹ್ನೆಯುಂಟು; ಅಜಿತನ ಚಿಹ್ನೆ ಆನೆ. ರೋಹಿಣಿ—ತೀರ್ಥಂಕರನ ಸೇವೆಯ ಯಕ್ಷಿ. ಮಹಾ ಯಕ್ಷ—ತೀರ್ಥಂಕರನ ಸೇವೆಯ ಯಕ್ಷ (ಅಜಿತಪುರಾಣ, ೧: ೧೪, ೧೫.) ಎಂಬಿನೆಗಂ ಸಂದ—ಎನ್ನುವ ವರ್ಣನೆಯನ್ನು ಹೊಂದಿದ. ಸಮ್ಮೇದ—ಈ ಹೆಸರಿನ ಪರ್ವತದಲ್ಲಿ ಅಜಿತನು ಪರಿನಿರ್ವಾಣಪಡೆದನು. ಈ ಪರ್ವತ ಬಿಹಾರ ಪ್ರಾಂತದಲ್ಲಿದೆ.

## ೪. ಸಗರೇಶ್ವರ ಚರಿತೆ

೧. ತೀರ್ಥನಾಥ—ತೀರ್ಥಂಕರ. ಚಕ್ರನಾಥ—ಚಕ್ರವರ್ತಿ. ತಕ್ಕಂ—ತಕ್ಕವನು, ಯೋಗ್ಯ.

**೧೧.** ಸ್ವರ್ಣಪಾಷಾಣ—ಚಿನ್ನದ ಕಲ್ಲು. ಕೃತಾಂತದಂತಾಂತರ ವಜ್ರಘಾತಜರ್ಝರೀಕೃತನ್—ಯಮನ ಹಲ್ಲುಗಳೊಳಗಿನ ವಜ್ರದ ಏಟನಿಂದ ಅರೆದುಹೋದವನು. ಎನಿತಾನುಮಂದದಿಂ-ಎಷ್ಟೋ ಬಗೆಯಾಗಿ. ಬಾಯಟ—ಅತಿಯಾಗಿ ಗೋಳಾಡು. ಕರುಣಾರುತ—ಕೇಳಿದವರಿಗೆ ಕರುಣೆಯುಂಟಾಗುವಂಥ ಗೋಳು. ಮಾಣಿಸಿ—ನಿಲ್ಲಿಸಿ.

**೨.** ಇಂ ಬರ್ಕುಮೇ—(ಹೋದ ಮಗ) ಇನ್ನು ಬರುತ್ತಾನೆಯೇ? ಗೆಂಟಾಯ್ತು — ದೂರವಾಯಿತು. ಕಾಲಾನಲಕಬಳಿತರ್ — ಕಾಲವೆಂಬ ಬೆಂಕಿಯ ಬಾಯಿಗೆ ತುತ್ತಾದವರು. ಶೋಕಾಂಧನೆ ಅಪ್ಪೈ—ಶೋಕದಿಂದ ವಿವೇಕವನ್ನು ಕಳೆದುಕೊಂಡು ಕುರುಡಾದವನಾಗುತ್ತೀಯೆ? ಆರ್ಮಂ—ಕಾಪಾಡಲು ಸಮರ್ಥವಾದದ್ದು, ಆಶ್ರಯ. ಒಡನೆ ತಳರ್ವಂ—ಒಟ್ಟಿಗೆ ಹೋಗೋಣ. ಸಂಸಾರಕಾಂತಾರ—ಹುಟ್ಟುಸಾವುಗಳ ಕಾಡು.

**೨೧.** ಅಪಗತಶೋಕನ್-ಶೋಕವನ್ನು ಹೋಗಲಾಡಿಸಿಕೊಂಡವನು. ಉಪಗತವಿವೇಕನ್—ವಿವೇಕವನ್ನು ತಂದುಕೊಂಡವನು. ಧೃತಿ—ಧೈರ್ಯ. ತ್ರಿಸಾಕ್ಷಿಕ—ತ್ರಿಕರಣಪೂರ್ವಕ. ಸರೋವರ ಪರಿಸರ ಉತ್ತಂಸ—ಸರೋವರದ ಸುತ್ತುಮುತ್ತಲಿಗೆ ತಲೆಯೊಡವೆ. ಗೀರ್ವಾಣ ಸುಖ—ಸ್ವರ್ಗಸುಖ. ಪ್ರತಿಬೋಧಿಸಿ—ತಿಳಿವಳಿಕೆ ಕೊಟ್ಟು ಎಚ್ಚರಿಸಿ. ವಿಷಯಸುಖಾವಮುಖರ್—ಇಂದ್ರಿಯಸುಖವನ್ನು ಕಣ್ಣೆತ್ತಿ ನೋಡದವರು. ದೀಕ್ಷಾಭಿಮುಖರ್—ದೀಕ್ಷೆಗೆ ಎದುರಾದವರು. ಸಂಕೇತ—ಒಪ್ಪಂದ. ಜಯಸೇನಚರ—ಹಿಂದಿನ ಜನ್ಮ

ದಲ್ಲಿ ಜಯಸೇನನಾಗಿದ್ದ ಜೀವ. ಅತಿಕರಾಳಾಲೋಕನಕಬಳಿತಾರಾತಿನಗರಂ—ಅತಿಕರಾಳವಾದ ಆಲೋಕನದಿಂದ (ಸುಮ್ಮನೆ ನೋಡಿದ್ದರಿಂದಲೇ) ಶತ್ರುವಿನ ನಗರಗಳನ್ನು ಕವಳಿಸಿದನು. ಪಣ್ಣಿ—ಸಜ್ಜಾಗಿ. ಸಿಂಧುರ—ಆನೆ. ಬೆಂಗೆವಂದು—ಬೆನ್ನಮೇಲೇರಿ. ತಳರ್ದು—ಹೊರಟು. ದಶಾಂಗ–ದಿವ್ಯವಾದ ಪುರ, ಭಾಜನ, ಭೋಜನ, ಶಯ್ಯಾ, ಆಸನ, ನಾಟ್ಯ, ರತ್ನ, ನಿಧಿ, ಸೇನೆ, ವಾಹನ ಎಂಬ ಚಕ್ರವರ್ತಿಯ ಹತ್ತುನಿಧಿಗಳು. ಪೊಱಲಸಿದ್ಧವನ—ಪಟ್ಟಣದ ಹೊರಗೆ, ಬಂದ ಸಿದ್ಧರು ತಂಗುವ ತೋಟ. ಷಣ್ಣವತಿ—ತೊಂಬತ್ತಾರು. ಪ್ರಭೃತಿಗಳ್—ಮೊದಲಾದವರು. ವಿಭೂತಿ—ವೈಭವ. ಚತುರ್ನಿಕಾಯಾಮರಜನ—ಭವನವಾಸಿ, ವ್ಯಂತರ, ಕಲ್ಪಾಮರ, ಜ್ಯೋತಿಷೀ ಎಂಬ ನಾಲ್ಕು ತರದ ದೇವತೆಗಳು. ಧರ್ಮಾವತಂಸಾಲಂಕೃತ ಕರ್ಣನ್—ಧರ್ಮವೆಂಬ ಅವತಂಸ (ಕಿವಿಯ ಒಡವೆಯನ್ನು) ಕಿವಿಗೆ ಅಲಂಕಾರಮಾಡಿಕೊಂಡವನು. ಭಟ್ಟಾರಕರ್—ಜೈನ ಗುರುಗಳು.

೩. ಧರ್ಮ ಉದನ್ವತ್ ಸೇತು—ಸಂಸಾರವೆಂಬ ಸಮುದ್ರಕ್ಕೆ ಧರ್ಮದ ಸೇತುವೆ. ಭವತ್‌ಸಖನ್ ಎಂ—ನಿನ್ನ ಸ್ನೇಹಿತನು ಆಗಿದ್ದೇನೆ. ಏನ್ ಅಱಿವೊ—ಏನು, (ನನ್ನ ಗುರುತು) ತಿಳಿಯುವೆಯೊ? ಮಹಾಬಲ ಚರನ್ನೈ—ಹಿಂದಿನ ಜನ್ಮದಲ್ಲಿ ಮಹಾಬಲನಾಗಿದ್ದವನು ನೀನು.

೪. ತ್ರಿದಶ—ಸ್ವರ್ಗ. ಸಂಸರಣ—ಹುಟ್ಟುಸಾವುಗಳ ಸಂಸಾರ. ಪಾರ—ದಡ. ಆಱನ್ಎ—ಸಮರ್ಥನಾಗಲೇ ಇಲ್ಲ.

೪೧. ಅಱಪಿ ಪೋಗು—ಕಳೆದು ಹೋಗು. ಚಾರಣಋಷಿ—ಗಗನ ಮಾರ್ಗದಲ್ಲಿ ಸಂಚರಿಸುವ ಋಷಿ. ಜಾತಿಜರಾ . . . ದುಃಖ—ಹುಟ್ಟು ಮುಪ್ಪು ಸಾವು ಅನಿಷ್ಟದ ಸಂಯೋಗ ಇಷ್ಟದ ವಿಯೋಗ ಇವುಗಳಿಂದ ಸಹಜವಾಗಿ ಹುಟ್ಟಿ ಶರೀರಕ್ಕೂ ಮನಸ್ಸಿಗೂ ಒದಗುವ ದುಃಖಗಳು. ಪತ್ತುವಿಟ್ಟು—ಸಂಬಂಧವನ್ನು ಬಿಟ್ಟು. ಅನಂತಚತುಷ್ಟಯಮಂ ಪೊರ್ದು—ಅನಂತ ದರ್ಶನ, ಅನಂತಜ್ಞಾನ, ಅನಂತವೀರ್ಯ, ಅನಂತಸುಖ ಎಂಬ ಆತ್ಮದ ನಾಲ್ಕು ಅನಂತಗುಣಗಳನ್ನು ಪಡೆ; ಕೇವಳಿಯಾಗು. ಕಿಱಿದುಂ ಬೇಗದಿಂ—ಸ್ವಲ್ಪ ಹೊತ್ತಿನಲ್ಲಿ.

೫. ಅಳವಿ—ಸಾಮರ್ಥ್ಯ. ಅಜರಾಮರನ್—ಮುಪ್ಪಿಲ್ಲದವನು,

ಮರಣವಿಲ್ಲದವನು. ಅಘಕೇತು—ಪಾಪವನ್ನು ಕ್ಷಮಿಸುವಮಾಡುವ. ಅಲ್ತಿಯೆ—ನಿನಗೆ ಪ್ರೀತಿಯೆ? ಚರ್ವಿತಚರ್ವಣ—ಅಗಿದದ್ದನ್ನೇ ಅಗಿಯುವುದು; ಅನುಭವಿಸಿದ್ದನ್ನೇ ಮತ್ತೆ ಅನುಭವಿಸುವುದು. ಅವಚಱು—ಅಂಟಿಕೊ(?) ಭವಾನುಭವಂ—ಪೂರ್ವಜನ್ಮಗಳ ಅನುಭವ.

೬. ಪರದುಃಖಶೀತಲಂ—ಇತರರ ದುಃಖವನ್ನು ಕಂಡು ತಾನು ತಂಪಾಗಿರುವವನು. ಮೆಚ್ಚಿದಪ್ಪೊಲ್ ನುಡಿದಪನ್—ಮನಸ್ಸುಬಂದಂತೆ ಮಾತನಾಡುತ್ತಾನೆ.

೬ಗ. ವೈರಾಗ್ಯಹೇತುವನ್ ಅವಧಾರಿಸಿ—ವೈರಾಗ್ಯಕ್ಕೆ ಕಾರಣ ಯಾವುದೆಂಬುದನ್ನು ಗಮನಿಸಿ.

೭. ಭವ—ಜನ್ಮ. ಸುತವ್ಯಪಾಯ—ಮಗನನ್ನು ಕಳೆದುಕೊಳ್ಳುವುದು. ಯೋಜಿಪೆ—ಹೊಂದಿಸಲು. ಒಸೆದಿರ್ದಂ—ಸಂತೋಷದಿಂದ ಇದ್ದನು. ಇರ್ಪಿನಂ—ಇರಲಾಗಿ.

೭ಗ. ಕಱಿಪುತಿರಲ್—ಕಳೆದುಹೋಗುತ್ತಿರಲು. ಕಿಱುದು ಬೇಗಂ—ಸ್ವಲ್ಪ ಹೊತ್ತು. ಬೀಡು—ವಾಸಸ್ಥಾನ.

೮. ಬೆಸನ್—ಆಜ್ಞೆ. ಬೆಸಕೆಯ್ಯದರ್—ಹೇಳಿದ ಕೆಲಸ ಮಾಡದವರು. ಬೆಸಕೆಯ್ಯಲ್—ಆಜ್ಞೆಯನ್ನು ನಡಸಲು. ಚಕ್ರರತ್ನ—ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲಿ ಒಂದು.

೮ಗ. ಆಗ್ರಹಬುದ್ಧಿಗಳ್—ಹಠದಿಂದ ಕೂಡಿದವರು.

೯. ಎರೆದವರ್ಗೆ ಆರ್ತು ಈಯಲ್—ಬೇಡಿದವರಿಗೆ ಸಮರ್ಥನಾಗಿ ದಾನಮಾಡಲು. ಧಾತ್ರಂ—ಬ್ರಹ್ಮ. ಬರ್ದಂ ಬರ್ದು—ಬದುಕು ಬದುಕಿ. ಬರ್ದು ಏ ಬರ್ದೆಂ—ಬದುಕನ್ನು ಏತಕ್ಕೆ ಬದುಕಿದೆವೋ!

೧೦. ಚಾಪಲಿಸೆ—ಹಿಡಿದು ಆಡಿಸಲು. ಮದೋದ್ಧತರ್ಕಳ್—ಮದದಿಂದ ಉದ್ಧತರಾದವರು. ಕದರ್ಥಿಸಿದರ್—(ಮತ್ತೆ ಮತ್ತೆ ಕೇಳಿ) ಪೀಡಿಸಿದರು. ಅಂಕದ—ಪ್ರಸಿದ್ಧರಾದ.

**೧೦ಗ.** ನಿಚ್ಚನಿಚ್ಚಂ—ಪ್ರತಿದಿನವೂ. ನಿಮ್ಮ ಬಲ್ಲಂದದೆ—ನಿಮಗೆ ತಿಳಿದ ಹಾಗೆ. ಕಾಪಂ ಮಾೞ್ಪುದು—ರಕ್ಷಣೆಮಾಡುವುದು. ದಿಕ್ಕರಿಕರಾಕಾರ—ದಿಗ್ಗಜಗಳ ಸೊಂಡಿಲಿನ ಆಕಾರವುಳ್ಳ. ಅಗುೞ್ಗಳ್—ಕಂದಕಗಳು.

ಪತ್ತುವಿಟ್ಟು—ಸಂಬಂಧವನ್ನು ಬಿಟ್ಟು. ಅನುರಕ್ತರ್ ಅಪ್ಪರ್—ಅನುರಾಗವುಳ್ಳಂಥವರು. ವಯಸ್ಯ—ಸ್ನೇಹಿತ. ಕೃತಕದಿಂ ಭಸ್ಮಾವಲೇಪನ—ಸುಮ್ಮನೆ ತೋರಿಕೆಗೆ ಬೂದಿಯಿಂದ ಮುಚ್ಚಿದ್ದು. ವಾರ್ತಾನಿವೇದನಾರ್ಥಂ—ಸುದ್ದಿಯನ್ನು ತಿಳಿಸುವುದಕ್ಕಾಗಿ. ಕಾದುಬುಪಿ—ಕಾಪಾಡಿ ಉಳಿಸಿ.

೧೧. ಅವಿಧಾ—ಅಯ್ಯಯ್ಯೋ. ಪಾರ್ವನ್—ಬ್ರಾಹ್ಮಣ. ನಿರ್ಘೃಣನ್—ಕರುಣೆಯಿಲ್ಲದವನು. ಜವ—ಯಮ. ಈಯವೇೞ್ಪುದು—ಕೊಡಬೇಕು. ತಂದು ಈಯದಂದು—ತಂದು ಕೊಡದೆ ಹೋದಾಗ. ವಿಮುಕ್ತಾಸುವೆನ್ ಅಪ್ಪೆನ್—ಜೀವವನ್ನು ಬಿಟ್ಟವನೇ ಆಗುತ್ತೇನೆ, ಖಂಡಿತ ಪ್ರಾಣ ಬಿಡುತ್ತೇನೆ. ಒದಱು—ಗಟ್ಟಿಯಾಗಿ ಕೂಗಿಹೇಳು. ರಾಜಾಲಯದ್ವಾರ—ಅರಮನೆಯ ಬಾಗಿಲು.

೧೧ಗ. ಕೆಯ್ಯತೊವಲ್‌ವೆರಸು—ದುಃಖದಿಂದ ಮೈಯ ತೊಗಲನ್ನು ಕೈಯಿಂದ ಹಿಂಡಿ ಹಿಸುಕಿ(?) ಪುಯಲ್—ಹುಯ್ಯಲು, ಕೂಗು. ಇನ್ನೆವರಂ—ಇದುವರೆಗೆ. ಅಶ್ರುತಪೂರ್ವಂ—ಹಿಂದೆ ಎಂದೂ ಕೇಳಿ ಇಲ್ಲದ್ದು. ಆಕ್ರಂದನ—ದೊಡ್ಡ ಅಳು. ಧರಾಮರ—ಭೂಸುರ, ಬ್ರಾಹ್ಮಣ. ಬಟು—ದೂತ. ಬೆಸಗೊಳ್—ಕೇಳು.

೧೨. ಪಂಪನ ಆದಿಪುರಾಣದಲ್ಲಿ. (ಆಶ್ವಾಸ ೧೫–೬ ರಿಂದ ೨೦.) ಭರತನು ಬ್ರಾಹ್ಮಣರನ್ನು ಪಡೆದದ್ದು ಹೇಗೆಂಬ ಕಥೆ ಇದೆ. ಹಿಂದೊಮ್ಮೆ ಜನರೆಲ್ಲಾ ನಡೆದುಬರುವ ದಾರಿಯಲ್ಲಿ ಭರತನು ಹೂಗಳನ್ನು ಚೆಲ್ಲಿಸಿದನಂತೆ. ಕೆಲವರು ಮಾತ್ರ ಅದನ್ನು ತುಳಿದು ಬರಲು ಒಪ್ಪಲಿಲ್ಲವಂತೆ. ಏಕೆಂದು ಕೇಳಿದರೆ, ಅದರಲ್ಲಿ ಜೀವಕೋಟಿ ಇದೆ, ಹಿಂಸೆಯಾಗುತ್ತದೆ ಎಂದರಂತೆ. ಇಂಥಾ ಪರಮ ಅಹಿಂಸಾಪರರೇ ಬ್ರಾಹ್ಮಣರೆನ್ನಿಸಿದರು.

೧೪. ಪರಕೆ—ಹರಕೆ. ಪಾಟಂ ಬಿಡು—ದೇವರಿಗೆ, ದೇವಸ್ಥಾನಕ್ಕೆ ಭೂಮಿಯನ್ನು ದತ್ತಿಯಾಗಿ ಬಿಡು.

೧೫. ಶರಣಾಗಾ—ನನಗೆ ನೀನೇ ರಕ್ಷಣೆಯಾಗು.

೧೬. ಅರಿದು ಆಯ್ತೇ—ಅಸಾಧ್ಯವಾಯಿತೇ.

೧೬ಗ. ಮೂದಲಿಸು—ಹೀಯಾಳಿಸು. ವಿಸ್ಮಯಾಕ್ರಾಂತ ಸ್ವಾಂತನ್—ಆಶ್ಚರ್ಯ ಮುತ್ತಿದ ಮನಸ್ಸುಳ್ಳವನು.

೧೭. ಯಶಃಪ್ರಸರ—ಯಶಸ್ಸಿನ ಹರವು. ಮಸುಳು—ಮಾಸು.

೧೮. ಅಪತ್ಯಶೋಕವಿಕಳಂ—ಮಗನನ್ನು ಕಳೆದುಕೊಂಡ ದುಃಖ ದಿಂದ ಬುದ್ಧಿ ಕಳೆದುಕೊಂಡವನು. ಎತ್ತಲ್ ಆರ್ಪರ್ ಒಳರೆ—ಬದುಕಿಸಲು ಸಮರ್ಥರಾದವರು ಇರುವರೆ? ಅರ್ಥಿ—ಬೇಡುವವನು.

೧೯. ಎತ್ತು—ಬದುಕಿಸು. ಅಘಟಂ—ಸಂಭವಿಸದುದು. ಮೂಡಿ ದನ್—ಹುಟ್ಟಿದನು.

೧೯ಗ. ಸತ್ತಱಿಯದರ್—ಸಾವು ಕಾಣದವರು. ಕಿರ್ಚು—ಕಿಚ್ಚು. ಕಿಱಿದಂತರಂಬರಂ—ಸ್ವಲ್ಪದೂರದ ವರೆಗೆ. ಮಗುಳ್ದು—ಪುನಃ

೨೦. ಎಳಜೊನ್ನಂ—ಎಳೆಯ ಬೆಳುದಿಂಗಳು. ಕಾಳಂ—ಕತ್ತಲೆ. ನೆರೆದರ್—ಸೇರಿದವರು. ಪೊಂದುವರ್—ಸಾವು ಹೊಂದುವರು. ಕಾಳಾಭೀಳ ವಕ್ತ್ರಾಂತ—ಕಾಲನ ಭಯಂಕರವಾದ ಮುಖದ ಒಳಗು. ಪುಗದರ್ ಒಳರೆ—ಪ್ರವೇಶಿಸದವರು ಇದ್ದಾರೆಯೇ? ಅಜ್ಜಪಜ್ಜರ್ಕಳ್—ಅಜ್ಜ ಮುತ್ತಜ್ಜ ಮೊದ ಲಾದವರು.

೨೧. ಅಱಿವು—ಜ್ಞಾನ. ಆನುಂ—ನಾನೂ. ಪೆಱಗನೆ—ಹಿಂದೆಯೇ. ಜವನ ಬಾರಿ—ಯಮ ಹಾಕುವ ಸರದಿ.

೨೨. ನೊಣೆ—ಆಗಿಯದೆ ನುಂಗು. ತಿರ್ಯಕ್—ಮೃಗಪಕ್ಷಿ ಮೊದ ಲಾದ ಪಶುವರ್ಗ.

೨೩. ಬಾೞ್ಗೆ ಎಂಗುಮೊ—ಬದುಕಿಕೊಳ್ಳಲಿ ಎನ್ನುವನೊ! ಮಾಣ್ಗೆ—ಹೋಗಲಿ. ಕಡೆಗಣಿಸು—ಅಲಕ್ಷಿಸು. ಪೆಣ್ಬಡೆ—ಹೆಂಗಸರ ಗುಂಪು.

೨೪. ಆಯು ನೆಱೆವಿನೆಗಂ—ಆಯುಸ್ಸು ತುಂಬುವ ವರೆಗೂ. ಜಾಯೆಂಬನೆ—ಜಾಯಿ (ಜಾತಿ?), ಈಗ ತಾನೆ ಹುಟ್ಟಿದ್ದು ಎನ್ನುವನೆ? ಅಧ್ಯಾಯಂ ಮಾಡುವೆನ್—ತಡೆಯುತ್ತೇನೆ. ಉಯ್ವಂ—ಒಯ್ಯುತ್ತಾನೆ.

೨೫. ಮುತ್ತಾಣ್ಮ—ಮುದುಕ. ಅಱಿವುಳ್ಳಂ—ತಿಳಿವವನು, ಜ್ಞಾನಿ. ಮರುಳ್—ಮಂಕು. ಮುಂಬಿಟ್ಟು—ದೃಷ್ಟಿಯಲ್ಲಿಟ್ಟು.

೨೬. ಕಲಿ—ವೀರ. ಪಂದೆ—ಹೇಡಿ. ನಾಣಿಲಿ—ನಾಚಿಕೆಯಿಲ್ಲ ದವನು. ಆಟಂದು—ಬಳಸಿ ಮೇಲೆಬಿದ್ದು.

೨೭. ಅಟ್ಟು ಏಱಿಸಿ ಬಯ್ತ್ತ ಬಾಡುಗಳ್—ಅಡಿಗೆ ಮಾಡಿ

(ತಟ್ಟೆಯ) ಮೇಲಿಟ್ಟು (ಹೊದಿಕೆಯಲ್ಲಿ) ಮರೆಮಾಡಿದ ಮಾಂಸಗಳು. ಖಾದ್ಯಂಗಳ್—ತಿನ್ನತಕ್ಕಂಥವು. ನಿವೇದ್ಯ—ತಿನ್ನಲು ಒಪ್ಪಿಸಿದ್ದು.

೩೦. ತ್ರಿಲೋಕ ಪಂಕೇಜ ಸಮುತ್ಥಜೀವಮಕರಂದ ಮದಾಳಿ—ಮೂರು ಲೋಕಗಳೆಂಬ ಕಮಲದಲ್ಲಿ ಹುಟ್ಟಿದ ಜೀವಗಳೆಂಬ ಮಕರಂದವನ್ನು ಸವಿದು ಮದಗೊಂಡ ದುಂಬಿ (ಯಾದ ಯಮ.) ಪರಿಸ್ಫುರತ್ ತೇಜನ್—ಎಲ್ಲಕಡೆಗೆ ಕೆದರುವ ಕಾಂತಿಯುಳ್ಳವನು. ಅಂಗಜಾಂತಕನ್—ಮನ್ಮಥನಿಗೆ ಯಮನಾದವನು. ಅಮೋಹನ್—ಮೋಹವಿಲ್ಲದವನು. ಅಘಾಂತಕನ್—ಪಾಪವನ್ನು ನಾಶಮಾಡಿದವನು. ಅಂತಕಾಂತಕನ್—ಯಮನನ್ನು ಕೊಂದವನು, ಮುಕ್ತಿಪಡೆದವನು. ಉೞಿದೊಂ—ಬೇರೆಯವನು. ಗೆಲಲ್ ಆರ್ಕುಮೆ—ಗೆಲ್ಲಲು ಸಮರ್ಥನಾಗುವನೆ?

೩೦ಗ. ತೊಡರ್ಚುವೆನ್—ತೊಡರಿಸುತ್ತೇನೆ, ಸಿಕ್ಕಿಸುತ್ತೇನೆ.

೩೧. ದರಹಸಿತ ಆನನನ್—ಸ್ವಲ್ಪ ನಗುವನ್ನುಳ್ಳ ಮುಖದವನು.

೩೧ಗ. ಭಸ್ಮಾವಶೇಷರ್—ಬೂದಿಮಾತ್ರವಾಗಿ ಉಳಿದವರು. ಅಶ್ರುಜಲವಿಗಳಿತವಿಲೋಚನನ್—ಕಣ್ಣೀರು ಸುರಿಯುತ್ತಿರುವ ಕಣ್ಣುಗಳುಳ್ಳವನು. ಅಪಗತ ಉತ್ತರೀಯನ್—ಮೇಲೆ ಹೊದೆದ ವಸ್ತ್ರ ಹೋದವನು. ಮನ್ಯು ಉದ್ಗತ ಕಂಠನ್—ಕಣ್ಣೀರು ಉಕ್ಕಿಬಂದ ಕೊರಳಿನವನು. ಅತಿಪ್ರಚುರ ವಿಪ್ರಲಾಪ ಅಕ್ಷರ ಮುಖರ ಮುಖನ್—ಹೆಚ್ಚಾದ ಗೋಳಿನ ಮಾತುಗಳಿಂದ ಗಳಹುವ ಬಾಯುಳ್ಳವನು. ಅಸಹ್ಯಶೋಕಪಾವಕಶಿಖಾಕಲಾಪಸಂತಪ್ಯಮಾನಮಾನಸನ್—ಸಹಿಸಲಾಗದ ಶೋಕವೆಂಬ ಬೆಂಕಿಯ ನಾಲಗೆಗಳಿಂದ ಬೆಂದುಹೋದಂಥ ಮನಸ್ಸುಳ್ಳವನು. ಮೆಯ್ಯನ್ ಈಡಾಡಿ—ದೇಹವನ್ನು (ನೆಲದ ಮೇಲೆ) ಚೆಲ್ಲಿ.

೩೨. ಪೂಣ್ದು—ಪ್ರತಿಜ್ಞೆಮಾಡಿ. ಬೆಸದಪ್ಪು—ಕೆಲಸ ಕೆಡು. ಸೈಪು ಸಮನಿಸದೆ—ಪುಣ್ಯ ಉಂಟಾಗದೆ.

೩೩. ಅನಭ್ರವಜ್ರಾಭಿಘಾತಂ-ಮೋಡವಿಲ್ಲದೆ ನಿರ್ಮಲವಾದ ಆಕಾಶದಿಂದ ಸಿಡಿಲು ಎರಗಿದ್ದು.

೩೪. ಉದ್ವೃಪ್ತ—ಉಕ್ಕಿದ. ಅವಿರಳ ಗಳತ್—ಒಂದೇ ಸಮನೆ ಸುರಿಯುತ್ತಿರುವ. ದಿವಸಂ—?

೩೫. ಚತುರ್ದಶ ರತ್ನ—ಚಕ್ರರತ್ನ, ಛತ್ರರತ್ನ, ಖಡ್ಗರತ್ನ, ದಂಡ ರತ್ನ, ಮಣಿರತ್ನ, ಕಾಕಿಣೀರತ್ನ, ಚರ್ಮರತ್ನ ಎಂಬ ಏಳು ಅಜೀವರತ್ನಗಳು; ಗೃಹಪತಿರತ್ನ, ಸೇನಾಪತಿರತ್ನ, ಗಜಪತಿರತ್ನ, ಅಶ್ವರತ್ನ, ತಕ್ಷಕರತ್ನ, ಪುರೋಹಿತರತ್ನ, ಸ್ತ್ರೀರತ್ನ ಎಂಬ ಏಳು ಜೀವರತ್ನಗಳು. ಇವುಗಳಲ್ಲಿ—ಹೋದಹೋದ ಕಡೆ ನೆಲವನ್ನು ಸಮಮಾಡುವುದು ದಂಡರತ್ನ, ಕತ್ತಲೆಯಾಗಿ ರುವ ಕಡೆ ಸೂರ್ಯಚಂದ್ರರ ಬೆಳಕನ್ನು ಕೊಡುವುದು ಕಾಕಿಣೀರತ್ನ, ಚಕ್ರ ವರ್ತಿಯ ಸೈನ್ಯವನ್ನು ನದಿಗಳ ಮೇಲೆ ಹಾಯಿಸುವುದು ಚರ್ಮರತ್ನ; ಉಳಿ ದುದು ಸುಲಭವಾಗಿದೆ.

೩೬. ಬಾಳಂ ಕಿತ್ತು—ಕತ್ತಿಯನ್ನು ಒರೆಯಿಂದ ಕಿತ್ತು. ಬಾಯ್ಕೇ ಳಿಸಿ–ದಮ್ಮಯ್ಯ ಎನ್ನಿಸಿ. ಬಲ್ಲಾಳ್–ಬಲಶಾಲಿಯಾದವನು.

೩೭. ಅಸಿರತ್ನ—ಖಡ್ಗರತ್ನ. ಉಜದೆ—(ಇವರು ಚಕ್ರವರ್ತಿಯಾದ ನಿನ್ನ ಮಕ್ಕಳು ಎಂಬುದನ್ನು) ಲಕ್ಷ್ಯಮಾಡದೆ.

೩೮. ನಿನಗಂ ಬಲ್ಲಿದರ್ ಒಳರೇ—ನಿನಗಿಂತ ಶಕ್ತರಾದವರು ಇದ್ದಾ ರೆಯೇ? ಮಾರ್ಮಲೆವರ್ ಒಳರೆ—ಎದುರು ನಿಲ್ಲುವವರು ಇದ್ದಾರೆಯೇ?

೩೯. ಅನಲಾಂತರಂ—ಇದಲ್ಲದೆ ಬೇರೆ ಬೆಂಕಿ. ದಗ್ಧವಾರಿ—ಬೆಂದು ದನ್ನು ಆರಿಸುವ ನೀರು, ದುಃಖಕ್ಕೆ ಪರಿಹಾರ. (?)

೪೦. ಕಿಚ್ಚು—ಬೆಂಕಿ. ಕತ್ತಿಗೆ—ಸಣ್ಣ ಕತ್ತಿ. ತಡೆದಿರ್ಪುದು—ಇನ್ನೂ ಬದುಕಿರುವುದು.

೪೧. ಒಗೆದ—ಉಂಟಾದ. ಜಿನಗೃಹಮಂ ಪುಗು—ಸಂನ್ಯಾಸಿನಿ ಯಾಗು. ಶಿಖಿಶಿಖೆಯಂ ಪುಗು—ಅಗ್ನಿಪ್ರವೇಶಮಾಡು.

೪೨. ಪಿಂಬಡಿನೊಳ್—ಹಿಂದುಗಡೆ. ಮಾನಸವಾಟಿೀ—ಮನು ಷ್ಯರ ಬಾಳೇ.

೪೩. ಆಂತು—ಹೊಂದಿ. ನಿಚಿತ—ಕೂಡಿದ. ಹೈಮಂ—ಚಿನ್ನದ.

೪೪. ಪೋಲ್ತತ್ತು—ಹೋಲಿತು. ಕುಚಾಂತರ—ಸ್ತನಗಳ ನಡುವೆ. ಧೂಮ್ರಧೂಮಚ್ಛವಿ–-ಕಂದುಬಣ್ಣದ ಹೊಗೆಯ ಕಾಂತಿ.

೪೫. ಕೈಗಣ್ಮೆ—ಮಿತಿಮೀರಲು. ನದಿಪಲ್ಕೆ — ನಂದಿಸುವುದಕ್ಕೆ. ಉಣ್ಮೆಪೊಣ್ಮುವ—ಉಕ್ಕಿ ಹೊಮ್ಮುವ.

**೪೭.** ವೇಗ—ತೀವ್ರತೆ. ಕನಕ ನಗ—ಚಿನ್ನದ ಬೆಟ್ಟ, ಮೇರು. ಗುಣ್ಪು—ಗಾಂಭೀರ್ಯ, ಆಳ.

**೪೮.** ಅನಿಲಾಹತಿ—ಗಾಳಿಯ ಏಟು. ಅನೋಕಹ ಅನೀಕ—ಮರಗಳ ಗುಂಪು. ಅದ್ರಿ—ಪರ್ವತ. ಪೃಥಗ್ಜನ—ಸಾಮಾನ್ಯಜನ.

**೫೧.** ಒಡ್ಡಿಸು—ಗುಂಪಾಗಿ ಎದುರಿಸು. ಅಹಿಮಕರ—ಸೂರ್ಯ.

**೫೧೧.** ಅವಷ್ಟಂಭ—ಅವಲಂಬನ.

**೫೨೧.** ಸಮಶೀಲವ್ಯಸನೇಷು ಸಖ್ಯಂ—ಸಮಾನವಾದ ನಡತೆ, ಸಮಾನವಾದ ಹವ್ಯಾಸ ಉಳ್ಳವರಲ್ಲಿ ಸ್ನೇಹ. ಬಲಿದು—ಗಟ್ಟಿಮಾಡಿ.

**೫೩.** ಮರವಾನಿಸನ್—ಮರದಿಂದ ಆದ ಮನುಷ್ಯ.

**೫೩೧.** ಸಿತಸರ್ಷಪ—ಬಿಳಿಯ ಸಾಸಿವೆ. ಇಱಯೆ ಸುರಿ—ಧಾರಾಕಾರವಾಗಿ ಸುರಿ. ತಪ್ತಾಯಃಕಟಾಹಪತಿತಲಾಜಃಪುಂಜ—ಕಾಯ್ದ ಕಬ್ಬಿಣದ ಗಡಿಗೆಯಲ್ಲಿ ಬಿದ್ದ ಅರಳಿನ ರಾಶಿ. ದೆಸೆದೆಸೆಗೆ—ದಿಕ್ಕುದಿಕ್ಕಿಗೂ. ಮಱುಮಾತುಗುಡು—ಹೇಳಿದುದಕ್ಕೆ ಉತ್ತರ ಹೇಳು. ಮೌನಂ ಸರ್ವಾರ್ಥಸಾಧನಂ—ಮೌನವು ಎಲ್ಲಾ ಅಭೀಷ್ಟಗಳನ್ನೂ ಆಗಿಸುವಂಥದು.

**೫೪.** ಕಡೆಯೆಯ್ದಿತ್ತು—ಕೊನೆಯನ್ನು ಹೊಂದಿತು. ತಡಿಸಾರ್ದು ಇರ್ದಪುದು—ದಡವನ್ನು ಮುಟ್ಟಿರುತ್ತದೆ. ಅಕ್ಕೆ—ಆಗಲಿ. ತಳ್ವು ಇಲ್ಲದೆ—ತಡವಿಲ್ಲದೆ. ಎರ್ದನ್—ಎದ್ದನು.

**೫೫.** ಮಹಿತ—ಹೆಚ್ಚಾದ. ಮಾಣ್ಗೆ—ನಿಲ್ಲಲಿ. ಅಪಗತದುರಿತಂ ಪಾಪಗಳನ್ನು ನೀಗಿಕೊಂಡವನು.

**೫೫೧.** ತಱಸಂದು—ನಿಶ್ಚಯಮಾಡಿ.

**೫೬.** ಬಗೆ ಕೂಡಿದುದು—ಮನಸ್ಸಿನಲ್ಲಿದ್ದುದು ನೆರವೇರಿತು. ಅಸ್ತ್ರಭವಾಬ್ಧಿ—ಸಂಸಾರವೆಂಬ ಸಮುದ್ರವು ಮುಗಿದುದಾಗಿ. ಮಿಳಿರೆ—ಗಾಳಿಯಲ್ಲಿ ಹಾರಾಡಲು. ಖಗಮಾರ್ಗ—ಆಕಾಶಮಾರ್ಗ.

**೫೬೧.** ಕೇವಳಿ—ಕೇವಲಜ್ಞಾನ ಪಡೆದವರು. ವಿಕ್ರಿಯೆ—ಸ್ವರೂಪವನ್ನು ಹೇಗೆಂದರೆ ಹಾಗೆ ಬದಲಾಯಿಸಿಕೊಳ್ಳುವ ಸಾಮರ್ಥ್ಯ. ಮಱೆದು ಇರ್ದ—ಮುಚ್ಚಿಹೋಗಿದ್ದ. ಕಾಳೆಗಕ್ಕಂ ಒಳಂ ಪುಯ್ಯಲ್ಗಂ ಒಳಂ—ಕಾಳಗ ಮಾಡುವುದಕ್ಕೂ ಇದ್ದಾನೆ, ಹುಯಿಲು ಹಾಕುವುದಕ್ಕೂ ಇದ್ದಾನೆ. ಸಂವೇಗ

—ಸಂಭ್ರಮ. ನಿರ್ವೇಗ—ಶಾಂತಿ. ವ್ಯತಿಕರ—ಹಾನಿ, ದುರ್ದೆಸೆ. ಬಂದಿಸಿ —ವಂದಿಸಿ. ಮುಕುಳಿತ ಅಂಜಲಿ—ಮೊಗ್ಗಿನಂತೆ ಮುಗಿದ ಕೈಬೊಗಸೆ.

೫೮. ಆಸನ್ನಭವ್ಯಂ—ಇಷ್ಟರಲ್ಲಿಯೇ ಜೈನನಾಗುವವನು. ವಿಪುಳ ಪುಳಕಸಂದೋಹಸಂಛನ್ನಗಾತ್ರಂ—ವಿಪುಲವಾದ ರೋಮಾಂಚದ ರಾಶಿಗ ಳಿಂದ ಮುಚ್ಚಿಹೋದ ಮೈಯುಳ್ಳವನು. ಸಕಲವಸುಮತೀ ಪ್ರಾಜ್ಯಸಾಮ್ರಾಜ್ಯ ಪಾತ್ರಂ—ಸಮಸ್ತಭೂಮಿಯೆಂಬ ಸಮೃದ್ಧವಾದ ಸಾಮ್ರಾಜ್ಯವನ್ನು ಒಳ ಕೊಂಡವನು. ವಿಗತ—ಹೋದಂಥ.

೫೮ಗ. ಶ್ರಾವಕ—ಜೈನ ಗೃಹಸ್ಥ. ಷಟ್ಪ್ರಪಂಚ—? ನಿಶ್ಶಲ್ಯಂಗೆಯ್ —ಚುಚ್ಚಿ ನೋಯಿಸುವ ಶಲಾಕೆಗೆ ಸಮನಾದ ಮೋಹವನ್ನು ಕಳೆ. ಚರಮ ದೇಹಧಾರಿ—ಕಡೆಯ ದೇಹ ಧರಿಸಿದವನು, ಮುಕ್ತಿ ಪಡೆಯುವವನು. ಇಷ್ಟಂ ಧರ್ಮೇಣ ಯೋಜಯೇತ್—ನಮಗೆ ಇಷ್ಟನಾದವನನ್ನು ಧರ್ಮದಲ್ಲಿ ತಂದು ಹೂಡತಕ್ಕದ್ದು. ಕಲ್ಯಾಣಮಿತ್ರಂ—ಪಾಪದಿಂದ ತಡೆದು, ಪುಣ್ಯದ ಕಡೆಗೆ ನಡಸುವ ಸ್ನೇಹಿತ. ಇನಿಬರುಮಂ—ಇಷ್ಟುಜನರನ್ನೂ. ಅಪವರ್ಗ—ಮುಕ್ತಿ. ನಿಗಳ—ಸಂಕಲೆ. ಪಱಿಯೆ ಪೊಯ್—ಹರಿದು ಬೀಳುವಂತೆ ಹೊಡೆ. ಬೆಂಕೊಂಡು—ಬೆನ್ನಟ್ಟಿ. ಪರಮಗತಿ—ಮುಕ್ತಿ. ನಿರ್ವೇಗ—ಶಾಂತಿ. ಮುಮುಕ್ಷು—ಮುಕ್ತಿಪಡೆದವರು. ಸಮಕ್ಷದೊಳ್—ಕಣ್ಣೆದುರಿಗೆ. ಸುಧಾ ಪಿಂಡಪಾಂಡುರ—ಅಮೃತದ ಉಂಡೆಯಂತೆ ಬಿಳುಪಾದ. ದುಗ್ಧಾಬ್ಧಿ—ಹಾಲಿನ ಕಡಲು. ಪ್ರಭಾವನೆ—ಪ್ರಭಾವವನ್ನು ಹರಡುವಿಕೆ.

೬೦. ಒಳಗು—ಒಳಗಿರುವಂಥದು, ನಿಜಸ್ಥಿತಿ. ವಿಪರೀತತೆ—ಇರುವು ದಕ್ಕೆ ತೀರ ವ್ಯತಿರಿಕ್ತತೆ. ಅನ್ವಿತಮಾದುದು—ಕೂಡಿಕೊಂಡಿತು.

೬೧. ಆ ಬಗೆಗೆಟ್ಟು—ಆ ಭಾವನೆಯಿಲ್ಲದೆ. ಅಪಸಿದ್ಧಾಂತಂ—ತಪ್ಪು ಸಿದ್ಧಾಂತ.

೬೨. ಪೋದರೊಳ್—ಹಿಂದಿನವರಲ್ಲಿ. ಆದರೊಳ್—ಈಗಾಗಿರುವವ ರಲ್ಲಿ. ಅಪ್ಪರೊಳ್—ಮುಂದಾಗುವವರಲ್ಲಿ. ಈ ದೊರೆಯವು—ಇವರಂತಹವು.

## ೫. ದಾನಚಿಂತಾಮಣಿ ಅತ್ತಿಮಬ್ಬೆ

೧. ಅಜಿತ . . . . ಭೃಂಗಿ—ಅಜಿತನೆಂಬ ಜಿನನ ಕಾಲುಗಳೆಂಬ

ಕಮಲಗಳ ದೂಳಿನಲ್ಲಿ ಚೆನ್ನಾಗಿ ಸೇರಿಕೊಂಡ ಹೆಣ್ಣುದುಂಬಿ. ಸುವಿನೇಯ ಜನಂ—ದೈವಭಕ್ತಿಯುಳ್ಳವರು. ನಾಡೆ—ಬಹುವಾಗಿ.

೨. ದಿಗಿಭ—ದಿಗ್ಗಜ. ಅಮರಕರಿ—ಐರಾವತ. ಆಹವಮಲ್ಲ—ಚಾಲುಕ್ಯ ಚಕ್ರವರ್ತಿ. ವಿಷಯ—ದೇಶ.

೩. ಜಿತಾನ್ಯವಿಷಯಂ—ಬೇರೆ ದೇಶವನ್ನು ಮೀರಿಸಿದ್ದು.

೪. ಅರ್ಥಿಮಯೂರ ಘನಾಗಮನ್—ಬೇಡುವವರು ಎಂಬ ನವಿಲುಗಳಿಗೆ ಮಳೆಗಾಲದ ಆಗಮನದಂತೆ ಇರುವವನು. ಅಧಿಗತ ವಿನೇಯಜನ ಹಿತಕರ ಜೈನಾಗಮನ್—ಭಕ್ತರಿಗೆ ಹಿತವನ್ನು ಉಂಟುಮಾಡುವ ಜೈನಧರ್ಮವನ್ನು ಸ್ವಾಧೀನಪಡಿಸಿಕೊಂಡವನು. ಅನುಕರಿಪೊಂ—ಅನುಕರಿಸುತ್ತಾನೆ. ಅಕ್ಷುಣ್ಣ—ಕಡಮೆಯಿಲ್ಲದ, ಬಹುವಾದ. ದಿಙ್ನಾಗ—ದಿಗ್ಗಜ.

೫. ಅನೂನಗುಣಂ—ಪರಿಪೂರ್ಣವಾದ ಗುಣಗಳುಳ್ಳವನು.

೬. ಅಶ್ವ ಇಭ ಆಗಮ—ಅಶ್ವಶಾಸ್ತ್ರ, ಗಜಶಾಸ್ತ್ರ. ಆರ್ತು ಈವ—ಕೊಡಲು ಸಮರ್ಥನಾಗಿ ಕೊಡುವ. ಭವ್ಯತೆ—ಜೈನಗುಣ. ಮಾನವ ಅನೀಕ—ಮನುಷ್ಯರ ಗುಂಪು.

೧೦. ಧೈರ್ಯದಲ್ಲಿ ಮಂದರ ಪರ್ವತದಂಥವನು, ಬಲ್ಮೆಯಲ್ಲಿ ಬ್ರಹ್ಮನಂಥವನು, ಧರ್ಮದಲ್ಲಿ ಧರ್ಮರಾಯನಂಥವನು ಈ ಪೊನ್ನ.

೧೧. ಇೞಿಪುದು—ಕಡಮೆಮಾಡುತ್ತದೆ, ಮೀರಿಸುತ್ತದೆ.

೧೨. ಪರೋಕ್ಷದೊಳ್—ಅವರು ಸತ್ತು ಮರೆಯಾದಾಗ. ತಂಮುತಿರ್ವರುಂ—ತಾವಿಬ್ಬರೂ. ಪರೆಯಿಸಿದರ್—ಹರಡಿಸಿದರು.

೧೩. ಮಾಂತನದ ಅಳವು—ದೊಡ್ಡತನದ ಅಳತೆ. ಅಜನ್ ಆಱನ್—ಬ್ರಹ್ಮನಿಗೂ ಸಾಧ್ಯವಿಲ್ಲ.

೧೪. ಗೋವಿಂದರ—ತೈಲಪನ ಶತ್ರುವಾದ ರಾಜ. ಸೆರಗಂ ಪಾಱದೆ ತಾಗಿ—ರಕ್ಷಣೆಯನ್ನು ಎದುರು ನೋಡದೆ ಶತ್ರುವಿನ ಮೇಲೆ ಬಿದ್ದು. ತೈಲಪ ನೃಪಂ ಬಾೞ್ಗೆ—ತೈಲಪನು ಬಾಳಲಿ, ಅವನಿಗೆ ಜಯವಾಗಲಿ. ಬಾಳ್ಗಿತ್ತು—ಕತ್ತಿಯನ್ನು ಒರೆಯಿಂದ ಕಿತ್ತು. ಮಚ್ಚರ—ಮತ್ಸರ. ಸಾರ್ಚಿದರಂ—ಹತ್ತಿರ ಬಂದವರನ್ನು. ಪಡಲ್ವಡಿಸು—ನೆಲಕ್ಕೆ ಬೀಳಿಸು, ಕೊಲ್ಲು. ಸರಿತ್ತೀರ—ನದಿಯ ದಡ. ಸುರಲೋಕಾತಿಥಿಯಾದ—ಮಡಿದ. ಗಂಡ—ವೀರ.

೧೫. ಮೂವಲೆ—ಮೂರಾದ ತಲೆ: ಪತಿಯ ಭಂಡಾರದಲ್ಲಿ, ಹಗೆಯವರ ಕೈಯಲ್ಲಿ, ದೇವಸ್ತ್ರೀಯರ ತೋಳಲ್ಲಿ. ಪೊನ್ನನ ಅನ್ನನ್—ಪೊನ್ನನಂಥವನು. ಮೊನೆ—ಯುದ್ಧ.

೧೫ಗ. ಸಮುದಿತ—ಹುಟ್ಟಿದಂಥ. ತುಂಗ—ಎತ್ತರವಾದ. ಗಜಘಟಾ—ಆನೆಯ ಹಿಂಡು. ಕಾಲತ್ರಯ—ಹಿಂದು, ಇಂದು, ಮುಂದು. ದಿಗಂಬರ ವೈರೋಚನ—ದಿಗಂಬರ ದರ್ಶನಕ್ಕೆ ಸೂರ್ಯನಂತಿರುವ. ಪ್ರವರ್ಧಮಾನ ಹೇತುಭೂತ ನಿಜಾದೇಶ—ಅಭಿವೃದ್ಧಿಗೆ ಕಾರಣವಾದ ತನ್ನ ಆಜ್ಞೆ.

೧೬ಗ. ಪುಣ್ಯಭಾಜನರು—ಪುಣ್ಯವಂತರು. ಚತುರುಪಧಾವಿಶುದ್ಧ—ಸ್ವಾಮಿಭಕ್ತಿ, ಅನಾಸಕ್ತಿ, ಬ್ರಹ್ಮಚರ್ಯ, ಧೈರ್ಯ ಎಂಬ ನಾಲ್ಕು ಉಪಧೆಗಳಲ್ಲಿ ಎಂದರೆ ತನ್ನ ನಿಃಸ್ಪೃಹತೆಯ ಪರೀಕ್ಷೆಗಳಲ್ಲಿ ಗೆದ್ದವನು.

೧೭. ಗೋನರ—ಒಬ್ಬ ರಾಜ. ಪೆಣೆದು—ತಾಗಿ.

೧೮. ಒಜಟರ ಮಲ್ಲ—ಅವಿಧೇಯರನ್ನು ಅಡಗಿಸುವವನು.

೧೯. ಪಡೆವಳ—ಸೈನ್ಯವುಳ್ಳವನು, ಸೇನಾಪತಿ. ಅಣ್ಣಿಗದೇವ—ಪಡೆವಳ ತೈಲನ ಹೆಸರು.

೨೦. ತಱಿಸಂದು—ನಿಶ್ಚಯಮಾಡಿ. ಕಡಿತಲೆಗೊಂಡು—ಕಡಿತಲೆ ಎಂಬುದು ಚಕ್ಕಳದ ಗುರಾಣಿ; ಅದನ್ನು ತೆಗೆದುಕೊಂಡು. ಮತಂಗಜ—ಆನೆ (ಯಂತಿರುವ ಶತ್ರು). ಪೊಣರ್ದು ಇಱಿದಂ—ಹೋರಾಡಿ ಕೊಂದನು.

೨೧. ಅಣಿಮುಟ್ಟಿ—ಸೈನ್ಯ ಬಂದು ತಾಗಿದರೆ. ಧುರಂಧರನಾಗದೇವನ್—ಧುರಂಧರನ್ ಆಗದೆ ಏವನ್, ಎಂದರೆ ಕೃತಕೃತ್ಯನಾಗದೆ ಏನು ಮಾಡುತ್ತಾನೆ, ಆಗಿಯೇ ಆಗುತ್ತಾನೆ, ಎಂದು ಅರ್ಥ. ಆಜಿ—ಯುದ್ಧ. ಅಂಗರಾಕ್ಷಸ—ದೇಹದಿಂದ ರಾಕ್ಷಸನಾದವನು, ಶತ್ರುಗಳನ್ನು ಸಂಹರಿಸಿದನು.

೨೨. ಕಳಕುಳಮಾಗೆ—ನಾಶವಾಗಲು. ಗಾತ್ರಕರದಂತಿವಿಘಾತದೊಳುಗ್ರದಂತಿಮುಕ್ತಾಳಕದುನಾಗರಂ—?

೨೩. ಬಲ್ಲಹ—ವಲ್ಲಭ, ಸ್ವಾಮಿ. ಬೆಸನ್—ಆಜ್ಞೆ. ಮಲ್ಲಮನಂ—ದೃಢ ಮನಸ್ಸುಳ್ಳವನು.

೨೩ಗ. ಸಮಾಗಮ—ಬಂದು ಸೇರುವಿಕೆ. ಪ್ರಸಾದಾಸಾದಿತ—ಪ್ರಸಾದದಿಂದ ಪಡೆದ. ಕಾಂತಾದ್ವಯ—ಇಬ್ಬರು ಹೆಂಡಿರು.

೨೪. ಪತಿಯುಂ ಪರೋಕ್ಷದೊಳ್—ಪತಿ ಮಡಿದ ಮೇಲೆ. ಅಳಿಪು—ಲೋಭ. ದೊರೆ—ತಕ್ಕದ್ದು.

೨೪ಗ. ಪರಿಚ್ಛೇದಿಸಿ—ನಿಶ್ಚಯಿಸಿ. ಬದ್ಧಾಂಜಲಿ—ಮುಗಿದ ಕೈ.

೨೫. ಬೆಸಗೊಳ್ವೆನ್—ಸಹಗಮನಕ್ಕೆ ಅನುಜ್ಞೆ ಕೇಳುತ್ತೇನೆ. ಕೊಂಡು—ಅಕ್ಕನ ಅನುಜ್ಞೆಯನ್ನು ಪಡೆದು. ಅಣ್ಮಿ—ಧೈರ್ಯದಿಂದ ಮೆರೆದು.

೨೫ಗ. ಗುಂಡು—ಸುತ್ತಿನ ಲೋಕ. ಸಮುಚಿತ—ತಕ್ಕ. ನೆಗಳೆ—ಉದ್ಯೋಗಿಸಲು.

೨೭. ದಹನಾರ್ಚಿ—ಸುಡುವ ಬೆಂಕಿ. ನಿವೇದಿತತನು—ದೇಹವನ್ನು ಒಪ್ಪಿಸಿದವಳು. ತನುವಂ ತನುಮಾಡು—ದೇಹವನ್ನು ಕೃಶಮಾಡು. ಅತನುವಿರೋಧ—ಮನ್ಮಥವಿರೋಧ, ಇಂದ್ರಿಯಗಳ ಸಂಯಮ. ತನುವಿರೋಧ—ದೇಹಕ್ಕೆ ವಿರೋಧ, ಉಪವಾಸ ವ್ರತ ಮುಂತಾದ್ದು.

೨೮. ಪತಿವಿಗಮ—ಗಂಡನನ್ನು ಕಳೆದುಕೊಂಡದ್ದು. ಅಸಿಧಾರಾವ್ರತ—ಕತ್ತಿಯ ಅಲಗಿನಂತೆ ತೀಕ್ಷ್ಣವಾದ ವ್ರತ. ಧರ್ಮಮಂ ಮಾಡುವ ಸಂತತಿ—ತಂದೆಯಂತೆ ತಾನೂ ಧರ್ಮವನ್ನು ಮಾಡುವ ಪದ್ಧತಿ. ಕಾಯುತೆ—ಕೆಡದಂತೆ ನಡಸುತ್ತ.

೨೯. ಒಡಮೆ—ಸಂಪತ್ತು. ಅನವರತ—ಎಡೆಬಿಡದ, ಸಂತತವಾದ. ತವಿಸಿ—ಕರಗಿಸಿ. ಪಡೆವಳ—ಸೈನ್ಯಾಧಿಪತಿ.

೩೧. ಭವ್ಯಾವಳಿ—ಭಕ್ತಸಮೂಹ.

೩೪. ವಿಕಲ್ಪ—ಭೇದ, ವ್ಯತ್ಯಾಸ.

೩೫. ಆಸನ್ನಭವ್ಯೆ—ಜೈನಧರ್ಮದ ಹತ್ತಿರ ಬಂದವಳು. ದೀಪಿಕೆ—ಬೆಳಗುವವಳು.

೩೭. ಸಮಯಕ್ಕೆ—ಶಾಸ್ತ್ರದಲ್ಲಿ ಹೇಳಿರುವ ಸಂಖ್ಯೆಗೆ. ಸಹಸ್ರಾಸ್ರ—?

೩೮. ಕುಕ್ಕುಟೇಶ್ವರ—ಗೋಮಟೇಶ್ವರ. ಜಿನಾಸನ್ನ—ಜಿನನ ಬಳಿ.

೩೯. ಜೈನರ ಕಾಲಗಣನೆಯಲ್ಲಿ ಉತ್ಸರ್ಪಿಣಿಯೆಂಬ ಕಾಲದಲ್ಲಿ ದಾನ ಧರ್ಮ ಏರುಮುಖವಾಗಿರುತ್ತದೆಂದೂ, ಅವಸರ್ಪಿಣಿ ಎಂಬ ಕಾಲದಲ್ಲಿ ದಾನಧರ್ಮ ಇಳಿಮುಖವಾಗಿರುತ್ತದೆಂದೂ ಕಲ್ಪನೆ. ಅತ್ತಿಮಬ್ಬೆ ಬಂದ ಕಾಲ

ಅವಸರ್ಪಿಣಿಯಾದುದಾದರೂ ಆಕೆಯ ದಾನಧರ್ಮದಿಂದ ಅದು ಉತ್ಸರ್ಪಿಣಿ ಎನ್ನಿಸಿತು.

೪೦. ತಾಮರಸೋದ್ಭವ—ಕಮಲದಲ್ಲಿ ಹುಟ್ಟಿದ ಬ್ರಹ್ಮ. ಜಡಜಜ—ಜಲದಲ್ಲಿ ಹುಟ್ಟಿದ ಕಮಲದಲ್ಲಿ ಹುಟ್ಟಿದವನು, ಜಡತ್ವದಲ್ಲಿ ಹುಟ್ಟಿದವನು, ಬ್ರಹ್ಮ.

೪೧. ಸವತ್ಸ ಅಮರೇಂದ್ರಧೇನು—ಕರುವಿನೊಡನೆ ಕೂಡಿದ ಕಾಮಧೇನು.

೪೨. ಎಱೆದ ಅರ್ಥಿಜನಕ್ಕೆ ಪದೆದು ಇತ್ತುದೆ ಧನಂ—ಬೇಡಿದ ಜನರಿಗೆ ಅನುರಾಗದಿಂದ ಕೊಟ್ಟದ್ದೆ ಉಳಿಯುವುದು. 'ಕೊಟ್ಟದ್ದು ಕೆಟ್ಟತೆನಬೇಡ, ಅದು ಮುಂದೆ ಕಟ್ಟಹುದು ಬುತ್ತಿ, ಸರ್ವಜ್ಞ.' ತನ್ನ ನಷ್ಟಂ ಯನ್ನದೀಯತೇ—ಯಾವುದನ್ನು ದಾನಮಾಡುವುದಿಲ್ಲವೋ ಅದು ನಷ್ಟವಾದಂತೆಯೇ.

೪೩. ಕನಕರಗಲಿ—ಚಿನ್ನವನ್ನು ಕೊಡುವ ಕಲಿ, ದಾನಿ. ನೊನೆಯೊಳ್ ಕಲಿ—ಯುದ್ಧದಲ್ಲಿ ಕಲಿ. (ತನುವಿರೋಧ, ಅತನುವಿರೋಧಗಳಲ್ಲಿ ವೀರೆ. ಪದ್ಯ ೨೭ ನೋಡಿ.) ಕೆಲ—ಪಕ್ಕ, ಜೊತೆ.

೪೪. ಅಸಿಲತೆ—ಲತೆಯಂತಹ ಕತ್ತಿ. ತಗುಳ್ದು—ಅನುಸರಿಸಿ.

೪೫. ವಿಭೂತಿ—ಮಹಿಮೆ. ಭವ್ಯಾಜಿರಕಲ್ಪಲತಾವಿಭ್ರಾಜಿತೆ—ಭವ್ಯರಿಗೆ (ಅಜಿರ) ವಿಹರಿಸುವಾದ ಕಲ್ಪಲತೆಯಂತೆ ಕಂಗೊಳಿಸುವವಳು.

೪೬. ಪಿಕ್ಕುವೊಡೆ ಅತ್ತಿಯ ಪಣ್—ಹಿಕ್ಕಿ ನೋಡಿದರೆ ಅತ್ತಿಯ ಹಣ್ಣಿನಂತೆ ಒಳಗೆಲ್ಲ ತುಂಬ ಬಿತ್ತ, ತುಂಬ ಹುಳು, ತಿರುಳು ಕಡಮೆ.

೪೭. ಭೂಮಿಯ ಮಗಳಿಗೆ, ಪುಲೋಮನ ಮಗಳಿಗೆ, ಪರ್ವತರಾಜನ ಮಗಳಿಗೆ, ದಕ್ಷನ ಮಗಳಿಗೆ, ದುಲ್ಲಪನ ಮಗಳು ಸಮಾನೆ.

೪೮. ಜಯಂತಾಂಬಿಕೆ—ಜಯಂತನ ತಾಯಿ ಶಚೀದೇವಿ.

೫೦. ಖಳಕಲಂಕ—ಕೆಟ್ಟತನದ ದೋಷ. ಪೊರ್ದು—ಹೊಂದು.

೫೧. ಆಳುರ್—ಆವರಿಸು, ವ್ಯಾಪಿಸು.

೫೨. ಅಜಿತಸೇನಮುನಿಪತಿ—ಚಾವುಂಡರಾಯನಿಗೂ ರನ್ನನಿಗೂ ಗುರುವಾಗಿದ್ದವರು. ಕೊಪಣಾಚಳ—ಕೊಪ್ಪಳದ ಬಳಿಯ ಬೆಟ್ಟ. ಜೈನರ ಯಾತ್ರಾಸ್ಥಳ.

೭೦. ಬಿತ್ತರಿಸು—ಕೀರ್ತಿಸು. ಪುರಾಣಚೂಡಾಮಣಿ—ಅತ್ತಿಮಬ್ಬೆಯ ತಂದೆಯಾದ ಮಲ್ಲಪನು ಪೊನ್ನನಿಂದ ಬರೆಸಿದ ಶಾಂತಿಪುರಾಣ. ನಿಮಿರ್ಚು—ಹರಡು.

೭೦. ಪೊರ್ದು—ಕಣ್ಣಿಗೆ ಕಾಣದೆ ಮರೆಯಾಗಿ ಹೂತು. ತಂದೆಯ ಪರೋಕ್ಷದೊಳ್—ತಂದೆ ಕಣ್ಣೆದುರಿಗಿಲ್ಲದಿರುವಾಗ.

೭೪. ಅಡರ್ಪು—ಆಶ್ರಯ, ಹರಡಿಕೊಳ್ಳುವುದಕ್ಕೆ ಅವಕಾಶ. ದಾಂಗುಡಿವಿಡು—ಬಳ್ಳಿಯಂತೆ ಹಬ್ಬಿ ಕುಡಿಬಿಡು.

೭೫. ಪಡಿಚಂದ—ಪ್ರತಿರೂಪ, ಸಮಾನವಾದದ್ದು.

೭೬. ಕೈವಾರದಿಂದೆ—ಸುತ್ತಲೂ ಹರಡುವಂತೆ.

೭೭. ಆಂತ — ಮೇಲೆ ಬಿದ್ದ. ಗೋಣ್ಮುರಿಗೊಳ್ — ಕತ್ತನ್ನು ಮುರಿದುಹಾಕು.



೭೮. ಆಜೀಯರ್—ಅಜೀವರ್ ಎಂದು ಇರಬಹುದು. ರಾಜನ ಸಿಂಹಾಸನ ಅವನಿಗುಂಟು, ಇವನಿಗಿಲ್ಲ. ವ್ಯತ್ಯಾಸವಿಷ್ಟೇ ಎಂಬುದು ಎಲ್ಲರಿಗೂ ಗೊತ್ತು.

೭೯ಗ. ಗಭಸ್ತಿಮಾಳಿ — ಸೂರ್ಯ. ಏನೊರೆತು ಎನೆ — ಎಂತಹದು ಎಂದರೆ.

೮೧. ನಿರ್ಭರ—ತುಂಬಿ ಅತಿವೇಗವಾದ. ಪರಿ—ಪ್ರವಾಹ. ಉಡುಗು —ಕಡಮೆಯಾಗು. ಒಳ್ಪು—ಮಹಿಮೆ.

೮೨. ಒದವಿದ—ಉಂಟಾದ. ಅದಿರದೆ—ಭಯಪಡದೆ.

೮೩. ಕೆಯ್ಸೂರ್ಕೆ—ಕೈಯಿಂದ ಜಾರಿ. ಬರ್ಪಿನಂ—ಬರುವತನಕ.

೮೪. ಅಳುರ್ವ—ವ್ಯಾಪಿಸುವ. ಉಪಶಮಿಸು—ಶಾಂತವಾಗು.

೮೫. ಒಡರಿಸು—ಪ್ರಯತ್ನಿಸು. ಪಱುಗಲ್—ಹರಿಗೋಲು. ಅಣಂ —ಸ್ವಲ್ಪವೂ. ಮಿಡುಕು—ಅಲ್ಲಾಡು. ತಿರಿ—ಸುತ್ತು.

೮೬. ಕುರುಳ ಪಾವೆ—ತಲೆಯ ಕೂದಲಿರುವ ಜಿನನ ವಿಗ್ರಹ (?)

೮೭. ನೆಗರ್ತೆ — ನೆಗಳ್ತೆ, ಪ್ರಸಿದ್ಧಿ. ಇಪ್ಪಳ್ — ಇರ್ದಪಳ್, ಇರುವಳು.

೮೮. ಅತ್ತಿಮಬ್ಬೆಯನ್ನು ಪುರಾಣ ಸ್ತ್ರೀಯರಿಗೆ ಹೋಲಿಸುತ್ತಾನೆ.

೮೯. ಅತ್ತಿಮಬ್ಬೆ ಜಿನಾಲಯಕ್ಕೆ ಸಾವಿರದಯ್ನೂರು ಜಿನನ ಪ್ರತಿಮೆಗಳನ್ನು ಘಂಟೆಗಳನ್ನು ಮಾಡಿಸಿದ ವರ್ಣನೆಯಿದೆ.

೯೦ಗ. ಆಯುಧಾಚಾರ್ಯ — ಆಯುಧಾಚಾರ್ಯ (?). ಧಮ್ಮಿಲ್ಲಮಾಳೆ—ತಲೆಯ ತುರುಬಿಗೆ ಮಾಲೆ, ಚೂಡಾಲಂಕಾರ. ಬೀಳವೃತ್ತಿ—ವೀರವೃತ್ತಿ.

೯೧. ಚಿರಂತನ—ಹಳೆಯ ಕಾಲದ. ಜೇಳಿಸೀ—ಒಬ್ಬಳು ಜಿನ ಭಕ್ತೆ. ಗೇಹ—ಮನೆ.

೯೨. ಅಧರಿತ ನಾಗೇಂದ್ರ ನಿಕೇತನಂ — ಅತಿಯೆತ್ತರದಲ್ಲಿ ನಾಗೇಂದ್ರನ ವಾಸಸ್ಥಾನವನ್ನು ಇಳಿಸಿದುದು. ಪ್ರೋತ್ತುಂಗ—ದೊಡ್ಡದಾದ. ಸಂಭಾಸ—ಚೆನ್ನಾಗಿ ಬೆಳಗುತ್ತಿರುವ.

೯೩. ಬಸದಿ—ಜಿನಾಲಯ.

೯೩ಗ. ಇಲ್ಲಿ ಅತ್ತಿಮಬ್ಬೆಗೆ ಬೇರೆಬೇರೆ ಬಿರುದುಗಳು ಬಂದುದಕ್ಕೆ ಕಾರಣಗಳನ್ನು ಹೇಳುತ್ತಾನೆ.

## ೯. ರನ್ನನ ಧರ್ಮಾಮೃತ

೧. ಅಲಂಕ್ರಿಯಾರಚನೆ ಹದಿನಾರು ಅಲ್ಲ, ಮೂವತ್ತಾರು; ನೇರ್ಪಟ್ಟು ಹೊಂದಿದ ಶೃಂಗಾರವು ಒಂದೇ ರಸವಲ್ಲ, ಒಂಬತ್ತು (ರಸಗಳು) ಚೆನ್ನಾಗಿ ಒಡಂಬಟ್ಟಿವೆ—ಎಂಬುದನ್ನು ಎನ್ನುವ ಹಾಗೆ ಅಂಗನೆಯರಿಗೆ ಉಚಿತವಾದ ರಸವನ್ನು ಅಲಂಕಾರವನ್ನು ತಾಳಿ, ಅದು ಒಪ್ಪಿದ ವಾಕ್ ಸುಂದರಿ ಬಂದು ನನ್ನ ಮುಖಾಂಭೋಜದಲ್ಲಿ ಸನ್ನಿಹಿತೆಯಾಗಲಿ. ಸನ್ನಿಹಿತೆ—ಬಂದು ಸೇರಿದವಳು.

೨. ತಿಳಿಯಿಸು ಮತಿ—ಸ್ಪಷ್ಟವಾಗುವಂತೆ ಹೇಳು.

೩. ಪಂಡಿತಮಂಡಳಿಗೆ ಮಾತ್ರ ರುಚಿಸುವುದಾದರೆ ಆ ಕಾವ್ಯ ಕಾವ್ಯವಾಗದು.

೪. ದರವುರ . . . . . ಮೆಸಿಸಿ—?

೫. ಅಕ್ಷರಿಗ—ಅಕ್ಷರ ಬಲ್ಲವನು.

೭. ಒಳ್ಳಿದರ್—ಒಳ್ಳೆಯವರು. ಎನಲ್ಕೆವೇಡ—ಎಂದು ಹೇಳಬೇಡ. ಅವರ ಪೋದೊಡೆ—ಅವರು ಗತಿಸಿಹೋಗಿದ್ದರೆ. ಕಬ್ಬಂ—ಕಾವ್ಯವು. ನಿಕಷಮಿಟ್ಟು—ಒರೆಗೆ ಹಚ್ಚಿ. ಬುಧರ್—ಪಂಡಿತರು.

೮. ಆರನ್ ಆರ್ ಬಾಜಃಪರೋ—ಯಾರನ್ನು ಯಾರು ತಡೆಯಲಾಗುತ್ತದೆಯೋ?

೯. ಪ್ರತಿಭೆ ಏನೇ ಸಹಜವಾಗಿದ್ದರೂ ಅದು ಓದಿನಿಂದ, ಕಲ್ಕೆಯಿಂದ ಬೆಳೆಯಬೇಕು, ಎನ್ನುತ್ತಾನೆ.

೧೦, ೧೧. ಹಣಕ್ಕಿಂತ ಗುಣ ದೊಡ್ಡದು, ಎನ್ನುತ್ತಾನೆ. ಇತ್ತರ್ ಎಲ್ಲಿದರ್—ದಾನಮಾಡಿದವರು ಎಲ್ಲಿದ್ದಾರೆ? ಪೆತ್ತವರುಂ ಎಲ್ಲಿದರ್—ದಾನವನ್ನು ಪಡೆದವರಾದರೂ ಎಲ್ಲಿದ್ದಾರೆ? ಆ ಧನಂ ಎಲ್ಲಿತು—ಆ ದಾನವಾಗಿ ಕೊಟ್ಟ ಹಣವು ಎಲ್ಲಿದೆ? ಮೆಳ್ಪಡು—ಮೋಸಹೋಗು. ಕವಿಕುಂಜರಾಂಕುಶ—ಕವಿಗಳೆಂಬ ಆನೆಗಳಿಗೆ ಅಂಕುಶನಾದ ರನ್ನ.

೧೨. ಒಡಲ್—ದೇಹ. ಒಡವೆ—ವಸ್ತು. ಕಸವರ—ಚಿನ್ನ. ಜಸಂ—ಯಶಸ್ಸು. ಮಾಱುಗುಡು—ಇದನ್ನು ಕೊಟ್ಟು ಅದನ್ನು ತೆಗೆದುಕೊ.

೧೩. ಮಾಡುವ ಧರ್ಮಕ್ಕೆ ಅರ್ಥ ಅವಿರುದ್ಧ; ಅರ್ಥಕ್ಕೆ ಕಾಮ ಅವಿರುದ್ಧ; ಕಾಮಕ್ಕೆ ಮೋಕ್ಷ ಅವಿರುದ್ಧ; ಚತುರ್ವಿಧ ಪುರುಷಾರ್ಥಗಳ ಫಲ ಹೀಗಿರಬೇಕು ಎಂಬ ಈ ಮಾತಿನೊಡನೆ ಪಂಪನ ಈ ಮಾತನ್ನೂ ನೋಡಿ:

ಧರ್ಮಾರ್ಥಕಾಮವೆಂಬಿವು
ಧರ್ಮಾರ್ಥಿಜನಕ್ಕೆ ನೆಱೆದ ನೆರ್ಮಂತವಱೊಳ್
ಧರ್ಮಂ ಪ್ರಧಾನಮರ್ಥಂ
ಧರ್ಮಾಂಘ್ರಿಪಫಳಮದರ್ಕ್ಕೆ ರಸಮುದು ಕಾಮಂ

ಧರ್ಮ ಮರ, ಅರ್ಥ ಅದರ ಫಲ, ಕಾಮ ಅದರ ರಸ, (ಮುಕ್ತಿ ಅದರ ಆನಂದ.)

೧೪. ತನಗಲ್ಲದ—ತಾನು ಆಶಿಸಬಾರದ. ಮನಂ ಇಟ್ಟು—ಆಸೆ ಪಟ್ಟು. ಅಪವರ್ಗ—ಮುಕ್ತಿ. ಪೊರ್ದು—ಹೊಂದು.

೧೫. ಮಾ ಎನಲ್ ಅಣ್ಮುವರ್—ಬೇಡ ಎಂದು ಹೇಳಲು ಧೈರ್ಯವುಳ್ಳವರು. ಆರ್ಮಂ—ಆಶ್ರಯ. ಇನ—ಸೂರ್ಯ.

೧೮. ಎನ್ನ ಉಕ್ತಿಗೆ ಒಡಂಬಡು—ನನ್ನ ಮಾತಿಗೆ ಒಪ್ಪು. ಮಗುಳಿ—ಪುನಃ.

೧೯. ರತ್ನತ್ರಯದಲ್ಲಿ ಪ್ರೀತಿಯುಳ್ಳವನಾಗು. ಭುವನತ್ರಯವನ್ನು ನಿನ್ನ ಅಡಿಗೆ ಎರಗಿಸು. ಕಾಲತ್ರಯವನ್ನೂ ಒಮ್ಮೆಗೇ ತಿಳಿಯುವ ಕೇವಲಜ್ಞಾನ ನಿನ್ನಲ್ಲಿ ನೆಲಸಲಿ.

೨೦. ತತ್‌ಸ್ವರೂಪದಿಂ — ಯಥಾರ್ಥವಾಗಿ. ಸಂಸೃತಿ — ಹುಟ್ಟು ಸಾವುಗಳ ಸಂಸಾರ. ತಿರಿ—ಅಲೆದಾಡು. ಜೀವಸ—ಚಿಂತೆ, ದುಮ್ಮಾನ.

೨೧. ಪಾಪದ ಸಂಪಾದನೆಯಿಂದ ನರಕ, ತಿರ್ಯಗ್ಗತಿ. ಪುಣ್ಯಾರ್ಜಿತದಿಂದ ಸುರಗತಿ. ಪಾಪಪುಣ್ಯದ ಮಿಶ್ರದಿಂದ ನರಗತಿ. ಎರಡೂ ದೂರ ಹೋದರೆ, ಮುಕ್ತಿಯೆಂಬ ಸುಗತಿ.

೨೨. ಅಱಿವು—ಜ್ಞಾನ. ನೆಗಱ್ತೆ—ಕರ್ಮ. ಹೇತು—ಕಾರಣ. ಮಿಕ್ಕ ಅಱಿವು—ಸಮ್ಯಕ್ ಜ್ಞಾನ. ಮಿಕ್ಕ ನಂಬುಗೆ—ಸಮ್ಯಕ್ ದರ್ಶನ. ಮಿಕ್ಕ ನೆಗಱ್ತೆ—ಸಮ್ಯಕ್ ಚಾರಿತ್ರ. ಕೂಟ—ಮೂರರ ಸೇರಿಕೆ.

೨೪. ಶ್ರುತ—ಜೈನಧರ್ಮವನ್ನು ತಿಳಿಯಪಡಿಸುವ ಆಗಮಗಳು. ಬೋಧ—ಜ್ಞಾನ. ಸುಗತಿ—ಮುಕ್ತಿ. ಉಭಯಭವ—ಇಹ ಪರ.

೨೫. ಕುತೀರ್ಥಧ್ವಾಂತ—ಕೆಟ್ಟ ಮತವೆಂಬ ಕತ್ತಲೆ. ತೂಳ್ದು—ದೂರ ತಳ್ಳಿ. ಬೋಧಾವಾಪ್ತಿ—ಜ್ಞಾನಪಡೆಯುವಿಕೆ. ಅರ್ಕಂಬೊಲ್—ಸೂರ್ಯನ ಹಾಗೆ. ಉದ್ಯೋತಿಸುಗೆ—ಬೆಳಗಲಿ.

೨೬. ನೆಗಳ್ಚಿದನ್—ಕೆಲಸಮಾಡಿಸಿದನು. ಅಸಮ—ಅನುಪಮವಾದ. ಒಸೆಗೆ—ಕರುಣಿಸಲಿ.

ಬಿ. ಬಿ. ಡಿ. ಪವರ್ ಪ್ರೆಸ್, ಅರಳೀಪೇಟೆ, ಬೆಂಗಳೂರು ನಗರ.

(ಹಿಂದಿನ ಹೊದಿಕೆಯಿಂದ ಮುಂದುವರಿದದ್ದು)

೧೦. ಶ್ರೀ ಬಾಹುಬಲಿ ವಿಜಯಂ
ಮತ್ತು ಶ್ರೀ ಗೋವಮಟ ಶಿಲ್ಪ ರೂ. ೧-೮-೦
(ಶ್ರವಣಬೆಳ್ಗೊಳದ ಗೋಮಟೇಶ್ವರನನ್ನು ಕುರಿತು ಎರಡು ನಾಟಕ. ಪಂಪಾದಿ ಮಹಾಕವಿಗಳ ಮಾತುಗಳನ್ನು ಪೋಣಿಸಿ. ಟಿಪ್ಪಣಿ ಸಹಿತವಾಗಿ.)

೧೧. ಕಾರ್ಕಳದ
ಗೊಮ್ಮಟಸ್ವಾಮಿ ರೂ. ೧-೦-೦
(ಚದುರಚಂದ್ರಮ, ಬೊಪ್ಪಣ, ಡಿ. ವಿ. ಜಿ., ಗೋವಿಂದ ಪೈ, ಕುವೆಂಪು ಇವರ ಗೊಮ್ಮಟಕೃತಿಗಳನ್ನು ಕುರಿತು.)

೧೨. ಪುಟಾಣಿ ಪಂಚತಂತ್ರ ರೂ. ೧-೨-೦
(ದುರ್ಗಸಿಂಹನ ಪಂಚತಂತ್ರದ ಸರಳವಾದ ಹೊಸಗನ್ನಡ ಪುನರ್ನಿರೂಪಣೆ.)

೧೩. ಅಲ್ಲಮಪ್ರಭು ರೂ. ೧-೪-೦
ಚಾಮರಸನ ಪ್ರಭುಲಿಂಗಲೀಲೆಯ ಸರಳ ಹೊಸಗನ್ನಡ ಪುನರ್ನಿರೂಪಣೆ.)

೧೪. ಮಾತಿನ ಮಲ್ಲಿ ರೂ. ೧-೪-೦
(ರತ್ನಾಕರನ ಭರತೇಶವೈಭವದಿಂದ ಒಂದು ಸಾಂಸಾರಿಕ ಚಿತ್ರ.)

೧೫. ನಕ್ಕಳಾ ತಾಯಿ ರೂ. ೧-೧೨-೦
(ಹಳಗನ್ನಡ ಸಾಹಿತ್ಯದಲ್ಲಿ ಹಾಸ್ಯದ ಪರಿಚಯ)

ಸತ್ಯಶೋಧನ ಪುಸ್ತಕ ಭಂಡಾರ
ಕೋಟೆ, ಬೆಂಗಳೂರು.